# Jñana  Loka

A Multi-Faceted, Multi-Language Monthly Magazine


## Table of Contents



**ಮುಖಪುಟ: ಮ್ಯೂನಿಕ್ ನಗರ ಕೇಂದ್ರದ ವಿಹಂಗಮ ಛಾಯಾಚಿತ್ರ, ನಗರ ಸಭಾಂಗಣದ ಮೇಲಿನಿಂದ ಕಂಡಂತೆ - ವೆಂಕಟೇಶಪ್ರಸನ್ನ**

**Title Page: Munich City Centre as seen from atop the City Hall building - Venkateshprasanna**



# ವಿಚಾರಲಹರಿ

- ಶಿವಪ್ರಸಾದ್ ಕೆ.

ಜ್ಞಾನಲೋಕದ ಕಳೆದೆರಡು ಸಂಚಿಕೆಗಳನ್ನು ಓದಿ ತಮ್ಮ ಅಭಿಪ್ರಾಯಗಳನ್ನು, ವಿಮರ್ಶೆಗಳನ್ನು ಮತ್ತು ಸಲಹೆಗಳನ್ನು ನೀಡಿದ ತಮ್ಮೆಲ್ಲರಿಗೂ ತುಂಬು ಹೃದಯದ ಧನ್ಯವಾದಗಳು. ತಮ್ಮೆಲ್ಲರ ನಿರೀಕ್ಷೆಯ ಮಟ್ಟಕ್ಕೆ ಮುಂದಿನ ಸಂಚಿಕೆಗಳನ್ನು ಹೊರ ತರುವ ಪ್ರಯತ್ನ ನಮ್ಮದು.

ಈ ಸಂಚಿಕೆಯ ವಿಚಾರ ಲಹರಿಯಲ್ಲಿ ಬೆಂಗಳೂರಿನ ಗಂಭೀರ ಸಮಸ್ಯೆ ಎಂದೇ ಪರಿಗಣಿಸಲ್ಪಡುವ 'ವೃಷಭಾವತಿ' ನದಿಯ ಬಗ್ಗೆ ಪ್ರಸ್ತಾಪಿಸಲು ಇಚ್ಛಿಸುತ್ತೇನೆ. ಇದು ಎಲ್ಲರಿಗೂ ಗೊತ್ತಿರುವ ಸಾಮಾನ್ಯ ವಿಷಯವೇ ಆಗಿರುವುದರಿಂದ ಇದರ ಬಗ್ಗೆಯೇ ಮತ್ತೆ ಓದುವುದೇನಿದೆ ಎಂದು ತಮಗನ್ನಿಸಬಹುದು. ಆದರೂ ನಾನು ಹೇಳಬಯಸಿರುವುದನ್ನು ಸ್ವಲ್ಪ ವಿಭಿನ್ನವಾಗಿ ವಿವರಿಸುತ್ತಿದ್ದೇನೆ.

ನಾಗರಿಕತೆ ಹುಟ್ಟು ಪಡೆದದ್ದು ನದಿ ಪಾತ್ರಗಳಲ್ಲಿ. ಹಾಗೆಯೆ ನಮ್ಮ ಕೆಂಪೇಗೌಡರು ಕಟ್ಟಿದ ಬೆಂಗಳೂರು ಹುಟ್ಟು ಪಡೆದದ್ದು ವೃಷಭಾವತಿ ನದಿ ತೀರದಲ್ಲೇ. ಆಗಿನ ಜನ ಮೂಲಭೂತವಾದ ನೀರಿನ ಸೌಕರ್ಯಕ್ಕಾಗಿ ಅವಲಂಬಿಸಿದ್ದು ಈ ವೃಷಭಾವತಿ ನದಿ ಮತ್ತು ಕೆಂಪೇಗೌಡರು ಕಟ್ಟಿಸಿದ ಕೆರೆಗಳನ್ನೇ. ವೃಷಭಾವತಿ ಬೆಂಗಳೂರಿನ ಬಸವನಗುಡಿಯ ಹತ್ತಿರ ಹುಟ್ಟಿತು ಎನ್ನುವುದು ಬಹುತೇಕ ಮಂದಿಗೆ ಗೊತ್ತಿರದ ವಿಚಾರ. ಆದರೆ ಇನ್ನೊಂದು ತರ್ಕದ ಪ್ರಕಾರ ಅದು ಮಲ್ಲೇಶ್ವರದ ಕಾಡು ಮಲ್ಲೇಶ್ವರ ದೇವಸ್ಥಾನದ ಹಿಂದೆ ಹುಟ್ಟುತ್ತದೆ. ಹೀಗೆ ಹುಟ್ಟಿ, ಬೆಂಗಳೂರಿನ ಅರ್ಧಭಾಗದಲ್ಲಿ ಹರಿದ ನದಿ ಆಗಿನ ಕಾಲದಲ್ಲಿ ಬೆಂಗಳೂರನ್ನು ನೀರಿನ ಕೊರತೆಯೇ ಇಲ್ಲದಂತೆ ಕಾಪಾಡಿತ್ತು. ಆದರೆ ವರ್ಷಗಳು ಕಳೆದಂತೆ ಹೆಚ್ಚಿದ ಜನಸಂಖ್ಯೆಯ ಕಾರಣದಿಂದ ಅಭಿವೃದ್ಧಿಯ ಹೆಸರಿನಲ್ಲಿ ಮೂಲ ಬೆಂಗಳೂರು ನಾಶವಾಗಿ ಹೋಯ್ತು. ವಸತಿ, ಕೈಗಾರಿಕೆ, ಮೂಲಸೌಕರ್ಯದ ಹೆಸರಿನಲ್ಲಿ ನಾವು ಮಾಡಿದ ಕಲ್ಮಶಗಳ ವರ್ಜನೆಗೆ ಹಲವಾರು ದಾರಿಗಳಿದ್ದರೂ ಅತಿ ಸುಲಭವಾದ ಮಾರ್ಗದ ಒಳಹೊಕ್ಕು ನಮ್ಮ ಕುಡಿಯುವ ನೀರಿನ ಮೂಲವಾಗಿದ್ದ ವೃಷಭಾವತಿಗೆ ನಾವೇ ವಿಷ ಸೇರಿಸಿಬಿಟ್ಟಿದ್ದೇವೆ. ವೃಷಭಾವತಿಗೆ ಬೆಂಗಳೂರು ಸಮೀಪದ ಹಲವಾರು ಸ್ಥಳಗಳಿಂದ ಹರಿದು ಸೇರುತ್ತಿದ್ದ ಚಿಕ್ಕ ಪುಟ್ಟ ತೊರೆಗಳನ್ನು ನಾವು ಉಪಯೋಗಿಸಿ ಬಿಟ್ಟ ಕಲುಷಿತ ನೀರು ಸೇರುವ ಚರಂಡಿಗಳಾಗಿ ಮಾರ್ಪಡಿಸಿ "ರಾಜ ಕಾಲುವೆ"ಗಳೆಂಬ ಹೆಸರಿಟ್ಟುಬಿಟ್ಟಿದ್ದೇವೆ. ಈ ಕಾರಣಗಳಿಂದ ಎಷ್ಟೋ ವರ್ಷಗಳ ಕಾಲ ಸ್ವಚ್ಛವಾಗಿ ಹರಿದು ನಮ್ಮನ್ನೆಲ್ಲ ನೀರಿನ ಕೊರತೆ ಇಲ್ಲದಂತೆ ಕಾಪಾಡುತ್ತಿದ್ದ ನದಿಯೊಂದು ಇಂದು ಚರಂಡಿಯಾಗಿ ಮಾರ್ಪಾಡು ಹೊಂದಿದೆ.




**ಇಸವಿ ೨೦೦೭, ನಾನು ಭಾರತೀಯ ಸ್ಟೇಟ್ ಬ್ಯಾಂಕ್ ನ ಬೆಂಗಳೂರು ಗ್ರಾಮಾಂತರ ವಿಭಾಗದ ಕೃಷಿ ಅಧಿಕಾರಿಯಾಗಿದ್ದೆ. ಕನಕಪುರ ಸಮೀಪದ ಚುಂಚಿ ಜಲಪಾತದ ಗ್ರಾಮವೊಂದರ ಹತ್ತಿರ ರೈತರೊಬ್ಬರ ಕೃಷಿ ಭೂಮಿಯ ಪರಿವೀಕ್ಷಣೆಗೆ ತೆರಳಿದ್ದೆ. ಬೇಸಿಗೆ ಕಾಲ ಅದು. ಆ ಪ್ರದೇಶದ ಹತ್ತಿರ ನದಿಯೊಂದು ಅತ್ಯಂತ ಶುದ್ಧವಾಗಿ ಹರಿಯುತಿತ್ತು. ಆ ಜಾಗವನ್ನು ನಮ್ಮನ್ನು ಕರೆದೊಯ್ದಿದ್ದ ರೈತರು ಅರ್ಕಾವತಿ ಮತ್ತು ವೃಷಭಾವತಿ ನದಿಗಳು ಸೇರುವ ಪ್ರದೇಶವೆಂದು ಪರಿಚಯಿಸಿದರು. ಬೆಂಗಳೂರಿನಲ್ಲಿ ಮಲಿನಗೊಂಡು ಹರಿಯುವ ವೃಷಭಾವತಿ ನದಿ, ಅರ್ಕಾವತಿಯೊಂದಿಗೆ ಸಂಗಮವಾಗಿ ಹರಿದು ಕನಕಪುರದ ಬಳಿ ಕಾವೇರಿ ನದಿಯನ್ನು ಸೇರುತ್ತದೆ.**

**ಈ ಎರಡು ನದಿಗಳು ಕಾವೇರಿ ನದಿಯನ್ನು ಸೇರುವುದಕ್ಕಿಂತ ಮುಂಚೆ ಪ್ರಾಕೃತಿಕವಾಗಿ ಶುದ್ಧಗೊಳ್ಳುತ್ತಿದ್ದವು. ಇದಕ್ಕೆ ಕಾರಣ ನದಿಗಳಲ್ಲಿ ಶೇಖರವಾಗುತ್ತಿದ್ದ ಮರಳು. ನೀರನ್ನು ಸ್ವಾಭಾವಿಕವಾಗಿ ಶುಚಿಗೊಳಿಸಲು ಸಾಮರ್ಥ್ಯವಿರುವ ಏಕೈಕ ವಸ್ತು ಎಂದರೆ ಮರಳು. ಇದು ಕೇವಲ ೧೨ ವರ್ಷಗಳ ಹಿಂದಿನ ಮಾತು. ಆದರೆ ಈಗ ಅಶುದ್ಧವಾದ ನದಿಗಳನ್ನು ಶುದ್ಧ ಮಾಡಲು ಈ ನದಿಗಳಲ್ಲಿ ಮರಳೇ ಇಲ್ಲ. ರಿಯಲ್ ಎಸ್ಟೇಟ್ ಎಂಬ ಭೂತ ನದಿಯಲ್ಲಿನ ಮರಳು ರಾಶಿಯನ್ನು ಸಂಪೂರ್ಣವಾಗಿ ನುಂಗಿ ಹಾಕಿದೆ. ಆಗ ನದಿಗಳಲ್ಲಿದ್ದ ಮರಳು ಈಗ ಬೆಂಗಳೂರಿನ ಮನೆಗಳಲ್ಲಿ, ಅಪಾರ್ಟ್ಮೆಂಟ್ ನ ಗೋಡೆಗಳಲ್ಲಿ, ಫ್ಲೈಓವರ್ ಗಳಲ್ಲಿ ಸಿಮೆಂಟ್ ನೊಂದಿಗೆ ಬೆರೆತು ಲೀನವಾಗಿದೆ.**

# ಜ್ಞಾನ  ಲೋಕ

ಬೆಂಗಳೂರಿನಲ್ಲಿ ಸ್ಫೋಟಗೊಂಡಿರುವ ಜನಸಂಖ್ಯೆಯಿಂದ ವೃಷಭಾವತಿ ಮತ್ತು ಅರ್ಕಾವತಿ ನದಿಗಳು ಸಂಪೂರ್ಣವಾಗಿ ಮಲಿನಗೊಂಡಿವೆ. ಒಂದು ಸಮೀಕ್ಷೆಯ ಪ್ರಕಾರ ಬೆಂಗಳೂರಿನ ನಾಗರಿಕರು ದಿನವೊಂದಕ್ಕೆ ೫ ರಿಂದ ೬ ಮಿಲಿಯನ್ ಲೀಟರ್‌ನಷ್ಟು ಮಲಿನಗೊಂಡು ವಿಷಪೂರಿತವಾದ ನೀರನ್ನು ವೃಷಭಾವತಿ ನದಿಯೊಂದಕ್ಕೆ ಕಾಣಿಕೆಯಾಗಿ ನೀಡುತ್ತಿದ್ದಾರೆ. ಈ ನೀರು ಹರಿದು ಎಲ್ಲಿ ಸೇರುತ್ತಿದೆ ಎಂದು ಯೋಚಿಸುವುದಾದರೆ, ಹೌದು!! ಇಡೀ ಬೆಂಗಳೂರು ನೀರಿಗಾಗಿ ಅವಲಂಬಿಸಿರುವ ಕಾವೇರಿ ನದಿಯನ್ನೇ.

ಇಲ್ಲಿ ಹಾಸ್ಯದ ಸಂಗತಿಯೆಂದರೆ ನಮ್ಮಿಂದಲೇ ಕಲುಷಿತವಾದ ವೃಷಭಾವತಿ ನದಿಯ ನೀರು ಅರ್ಕಾವತಿಯೊಂದಿಗೆ ನಾವು ಜೀವಜಲಕ್ಕಾಗಿ ಅವಲಂಬಿಸಿರುವ ಕಾವೇರಿಗೆ ಸಂಗಮವಾಗಿ ಕೆಲವೊಂದು ನೀರು ಶುದ್ದೀಕರಿಸುವ ರಾಸಾಯನಿಕಗಳೊಂದಿಗೆ ಕೂಡಿ ಮರಳಿ ನಮ್ಮ ದೇಹವನ್ನೇ ಜೀವಜಲವಾಗಿ ಸೇರುತ್ತಿದೆ. ಇನ್ನೊಂದು ಗಮನಿಸಬೇಕಾದ ಅಂಶವೆಂದರೆ ಇವೆರಡು ನದಿಗಳು ಸಂಗಮವಾಗುವ ಸ್ಥಳದಲ್ಲಿ ನಮ್ಮ ಸರ್ಕಾರ ಬೆಂಗಳೂರಿನ ನೀರಿನ ಬರವನ್ನು ನೀಗಿಸಲು ಮೇಕೆದಾಟು ಯೋಜನೆ ಎಂಬ ಹೆಸರಿನಲ್ಲಿ ಒಂದು ಜಲಾಶಯದ ನಿರ್ಮಾಣಕ್ಕೆ ಮುಂದಾಗಿದೆ. ಈ ಎರಡು ನದಿಗಳು ಸಂಗವಾಗುವ ಈ ಸ್ಥಳದಿಂದಲೇ ಬೆಂಗಳೂರಿನ ಕುಡಿಯುವ ನೀರಿಗೆ ವ್ಯವಸ್ಥೆ ಕಲ್ಪಿಸಹೊರಟಿದ್ದಾರೆ.

ಕೆಂಗೇರಿ ಮೋರಿ ಎಂದು ಎಂದು ಮೂಗು ಮುರಿಯುವ ಹಾಗೂ ವೃಷಭಾವತಿ ನದಿಯ ಪುನರುತ್ತಾನಕ್ಕೆ ಯಾವುದೇ ಕ್ರಮಗಳನ್ನು ಕೈಗೊಳ್ಳದಿರುವ ನಮಗೆ ಮತ್ತು ನಮ್ಮ ಸರಕಾರಕ್ಕೆ ಈ ವಾಸ್ತವದ ವಿಚಾರ ತಿಳಿದಂತಿಲ್ಲ. ಇದಕ್ಕೆ ಹೇಳಿರಬಹುದು, "ಮಾಡಿದ್ದುಣ್ಣೋ ಮಾರಾಯ" ಎಂದು...

## Poetry: Cerebral Palsy

**- Dr. Chandana Sri**

( Written by Dr. Chandana four years ago, when a kid with cerebral palsy had visited her for pneumonia treatment. Her thoughts on what the kid might have been thinking... )

Every time you look at me,
Do you wish I'd disappear?
Is that all I'll ever be?
A nightmare of your deepest fear?

Do you see a hapless weight?
Spastic, mute and imbecile...
Just a cruel trick of fate...
Never really worth the while...

Or will you just laugh at me?
Mock me and my clumsy ways...
Can you even hope to see -
The spirit within me, ablaze?

Will you simply give me love -
For the joys that you could glean
Take me for what I am now -
Not for what I could have been....

## ಕೋನಿಗ್ಸ್‌ಬರ್ಗ್‌ನ ಏಳು ಸೇತುವೆಗಳು ಮತ್ತು ಗಣಿತದ ಒಗಟು: ಭಾಗ ೨

- ವೆಂಕಟೇಶಪ್ರಸನ್ನ



ಏಪ್ರಿಲ್ ತಿಂಗಳ ಸಂಚಿಕೆಯಲ್ಲಿ **ಕೋನಿಗ್ಸ್‌ಬರ್ಗ್** ನಗರ (ಇಂದಿನ ಕಲಿನಿಂಗ್ರಾಡ್), **ಪ್ರೇಗಲ್** ನದಿ, ಆ ನದಿಯ ಮೇಲೆ ಆ ನಗರದಲ್ಲಿ ಕಟ್ಟಿದ್ದ **ಏಳು ಸೇತುವೆಗಳು** ಮತ್ತು ಅವುಗಳಿಂದ ಸೃಷ್ಟಿಯಾದ ಗಣಿತದ ಒಗಟಿನ ಬಗ್ಗೆ ಪ್ರಸ್ತಾಪಿಸಲಾಗಿತ್ತು. ತಮ್ಮ ಊರಿನಲ್ಲಿದ್ದ ಏಳೂ ಸೇತುವೆಗಳನ್ನು ಒಮ್ಮೆ ಮಾತ್ರ ದಾಟುತ್ತಾ ತಮ್ಮ ಊರಿನ ಭಾಗಗಳನ್ನೆಲ್ಲಾ ಕ್ರಮಿಸುವುದೇ ಆ ಸಮಸ್ಯೆ. ಆದರೆ ಹಲವಾರು ವರ್ಷಗಳ ಪ್ರಯತ್ನದ ನಂತರವೂ ಯಾರಿಗೂ ಅಂತಹದ್ದೊಂದು ಪಥವನ್ನು ಕಂಡುಹಿಡಿಯಲಾಗಿರಲಿಲ್ಲ.

ಮೇಯರ್ **ಕಾರ್ಲ್ ಗಾಟ್ಲೀಬ್ ಈಲರ್** ಈ ವಿಚಾರವಾಗಿ ಗಣಿತಜ್ಞ **ಲಿಯೊನಾರ್ಡ್ ಆಯ್ಲರ್**‌ನನ್ನು ಸಂಪರ್ಕಿಸಿದ ಮೇಲೆ ಈ ಸಮಸ್ಯೆಗೆ ಪರಿಹಾರ ದೊರೆಯುವ ಲಕ್ಷಣಗಳು ಕಾಣತೊಡಗಿದವು. ಜಗತ್ತು ಕಂಡ ಮಹಾನ್ ವಿಜ್ಞಾನಿಗಳಲ್ಲೊಬ್ಬ ಆಯ್ಲರ್. ೫೦೦ಕ್ಕೂ ಹೆಚ್ಚು ವಿಜ್ಞಾನ-ಗಣಿತ ಕುರಿತ ಪುಸ್ತಕಗಳು ಮತ್ತು ವಿದ್ವತ್ಪ್ರಬಂಧಗಳನ್ನು ತನ್ನ ಜೀವಿತಾವಧಿಯಲ್ಲಿ ರಚಿಸಿದ ಮಹಾನುಭಾವ. ಕೇವಲ ೧೭೭೫ರ ಒಂದು ವರ್ಷದಲ್ಲೇ ಸರಾಸರಿ ವಾರಕ್ಕೊಂದರಂತೆ ಗಣಿತದ ಕುರಿತಾದ ವಿದ್ವತ್ಪ್ರಬಂಧಗಳನ್ನು ಹೊರತಂದವನು ಆಯ್ಲರ್. ಗಣಿತವಷ್ಟೇ ಅಲ್ಲದೆ ಖಗೋಳಶಾಸ್ತ್ರ (astronomy), ಯಂತ್ರಶಾಸ್ತ್ರ (mechanics), ದೃಕ್‌ಶಾಸ್ತ್ರ (optics), ಜಲಚಲನಶಾಸ್ತ್ರ (hydrodynamics) ಮತ್ತಿತರ ಭೌತಶಾಸ್ತ್ರದ ಶಾಖೆಗಳಲ್ಲಿ ಆಳವಾದ ಅಧ್ಯಯನಗಳನ್ನು ನಡೆಸಿದ್ದ.

ಆದರೆ ಈಲರನಿಂದ ಬಂದ ಈ ಸಮಸ್ಯೆಯ ಪತ್ರವನ್ನು ನೋಡಿದಾಗ ಮೊದಲಿಗೆ ಆಯ್ಲರನಿಗೆ ಅದೊಂದು ಮುಖ್ಯವಾದ ಸಮಸ್ಯೆ, ಅದಕ್ಕೆ ತನ್ನ ಸಮಯವನ್ನು ಮೀಸಲಿಡುವುದು ಅಗತ್ಯ ಎನ್ನಿಸಲಿಲ್ಲ. ತನ್ನ ಮಾರುತ್ತರವನ್ನು ಅವನು ಬರೆದು ಮುಗಿಸಿದ್ದು ಹೀಗೆ:

*"... ಆದ್ದರಿಂದ, ಮಹನೀಯರೇ, ಈ ಮೇಲೆ ಹೇಳಿರುವ ಕಾರಣಗಳಿಂದ ನನ್ನ ಅನಿಸಿಕೆಯೇನೆಂದರೆ ಈ ಸಮಸ್ಯೆಗೂ ಗಣಿತಕ್ಕೂ ಯಾವುದೇ ಸಂಬಂಧವಿದ್ದಂತಿಲ್ಲ. ಕೇವಲ ತಾರ್ಕಿಕ ವಿಶ್ಲೇಷಣೆಯಿಂದಲೇ ಇದಕ್ಕೊಂದು ಪರಿಹಾರವನ್ನು ಕಂಡುಹಿಡಿಯಬಹುದೆನಿಸುತ್ತದೆ. ಇದಕ್ಕೆ ಯಾವುದೇ ಗಣಿತದ ಸಿದ್ಧಾಂತಗಳ ಅವಶ್ಯಕತೆಯಿಲ್ಲ. ಆದಾಗ್ಯೂ, ಇಂತಹ ಸಮಸ್ಯೆಗಳನ್ನು ಗಣಿತಜ್ಞರೇ ತರ್ಕಶಾಸ್ತ್ರಜ್ಞರಿಗಿಂತ ಸುಲಭವಾಗಿ ಹೇಗೆ ಪರಿಹರಿಸುತ್ತಾರೆ ಎಂಬುದು ಆಶ್ಚರ್ಯವೇ ಸರಿ!"*

ಹೀಗಿದ್ದರೂ ಆಯ್ಲರನಿಗೆ ಈ ಸಮಸ್ಯೆ ಮನಸ್ಸಿನೊಳಗೆ ಕೊರೆಯುತ್ತಲೇ ಇತ್ತು. ಇನ್ನೊಂದು ಪತ್ರದಲ್ಲಿ ಆಯ್ಲರ್ ಹೀಗೆ ಬರೆಯುತ್ತಾನೆ:

# Jñana  Loka

*" ಈ ಪ್ರಶ್ನೆ ಬಹಳ ನೀರಸವೆನಿಸುತದೆ. ಆದರೂ ನನಗೆ ಇದರ ಮೇಲೆ ಗಮನ ಹರಿಸಬೇಕೆನಿಸುತ್ತಿದೆ. ಏಕೆಂದರೆ ಇಂದಿನ ರೇಖಾಗಣಿತವಾಗಲೀ (geometry) ಅಥವಾ ಬೀಜಗಣಿತವಾಗಲೀ (algebra) ಈ ಸಮಸ್ಯೆಯನ್ನು ಬಿಡಿಸುವಲ್ಲಿ ತಮ್ಮದೇ ಆದ ಕೊಡುಗೆ ನೀಡಲಾರವು. ಈ ಸಮಸ್ಯೆಯನ್ನು ಬಹುಶಃ ಜರ್ಮನಿಯ ಮಹಾನ್ ತತ್ವಜ್ಞಾನಿ ಮತ್ತು ಗಣಿತಜ್ಞ ಗಾಟ್‌ಫ್ರೀಡ್ ಲೈಬ್ನಿಟ್ಸ್ (Gottfried Leibniz) ಮನಗಂಡ ಗಣಿತದ ಮತ್ತೊಂದು ಹೊಸ ಶಾಖೆಯ ಭಾಗವಾಗಿಯೇ ನೋಡಬೇಕು. ಅವರು ಹೇಳಿದಂತೆ ಇದು ಸ್ಥಾನಾಧಾರಿತ ರೇಖಾಗಣಿತವೇ (Geometry of Positions)."*

**ಹೀಗೆ ಹುಟ್ಟಿದ್ದು "ಗ್ರಾಫ್ ಥಿಯರಿ" - Geometry of Positions ಎಂದು ಲೈಬ್ನಿಟ್ಸ್ ಕರೆದ ಶಾಖೆ ಇಂದು ಗ್ರಾಫ್ ಥಿಯರಿ. ಈ ಶಾಖೆಯ ಹುಟ್ಟಿಗೆ ಕಾರಣವಾದ ಮೊದಲ ಸಮಸ್ಯೆ ಈ ಕೋನಿಗ್ಸ್‌ಬರ್ಗ್‌ನ ಏಳು ಸೇತುವೆಗಳ ಒಗಟು. ಈ ಗ್ರಾಫ್ ಥಿಯರಿಯನ್ನು ನಾವು ಕನ್ನಡದಲ್ಲಿ ಬಿಂದುರೇಖಾಗಣಿತವೆಂದು ಕರೆಯಬಹುದೇನೋ! ಬಿಂದುಗಳು, ರೇಖೆಗಳೇ ಇದಕ್ಕೆ ಆಧಾರ.**

**ಈಗ ಈ ಸಮಸ್ಯೆಯ ಪರಿಹಾರಕ್ಕೆ ಬರೋಣ. "ಸಲ್ಯೂಶಿಯೋ ಪ್ರಾಬ್ಲಮಾಟಿಸ್ ಆಡ್ ಜೊಮೆಟ್ರಿಯಮ್ ಸಿಟುಸ್ ಪರ್ಟಿನೆಂಟಿಸ್" (Solutio problematis ad geometriam situs pertinentis) ಎಂಬ ವಿದ್ವತ್ಪ್ರಬಂಧವನ್ನು ಆಯ್ಲರ್ ೧೭೩೫ರಲ್ಲಿ ಬರೆದದ್ದು ೧೭೪೧ರಲ್ಲಿ ಪ್ರಕಟವಾಯಿತು. ಈ ಪ್ರಬಂಧದಲ್ಲಿ ಆಯ್ಲರ್ ಕೇವಲ ಕೋನಿಗ್ಸ್‌ಬರ್ಗ್ ಸೇತುವೆಗಳ ಸಮಸ್ಯೆಯನ್ನು ಬಿಡಿಸಿದ್ದಷ್ಟೇ ಅಲ್ಲದೆ ಸಾರ್ವತ್ರಿಕವಾಗಿ ಇಂತಹ ಸಮಸ್ಯೆಗಳಿಗೆಲ್ಲಕ್ಕೂ ಅನ್ವಯವಾಗುವಂತೆ ಪರಿಹಾರವನ್ನೂ ಒದಗಿಸಿದ. ಅದರ ಭಾಗವಾಗಿ ಕೋನಿಗ್ಸ್‌ಬರ್ಗ್‌ನ ಆ ಏಳು ಸೇತುವೆಗಳಲ್ಲಿ ಪ್ರತಿಯೊಂದನ್ನೂ ಒಮ್ಮೆ ಮಾತ್ರ ದಾಟಿ ಎಲ್ಲವನ್ನೂ ದಾಟುವುದು ಅಸಾಧ್ಯ ಎಂದೂ ಸಾಬೀತು ಮಾಡಿದ.**

**ಕೆಳಗಿನ ಚಿತ್ರ, ಇಲ್ಲಿ ಬಹಳ ಮುಖ್ಯ. ಆಯ್ಲರ್ ತನ್ನ ಪ್ರಬಂಧದಲ್ಲಿ ಕೋನಿಗ್ಸ್‌ಬರ್ಗ್ ಸೇತುವೆಗಳನ್ನು ಪ್ರತಿಬಿಂಬಿಸುತ್ತಾ, ಭೂಭಾಗಗಳಿಗೂ ಮತ್ತು ಸೇತುವೆಗಳಿಗೂ ಇಂಗ್ಲಿಷ್ ಅಕ್ಷರಗಳಿಂದ ನಾಮಕರಣ ಮಾಡಿದ. ಒಂದೇ ಭೂಭಾಗಕ್ಕೆ ಒಂದಕ್ಕಿಂತ ಹೆಚ್ಚು ಸೇತುವೆಗಳು ದಾರಿ ತೋರಿದರೂ ಸಹ ಆ ಭೂಭಾಗವನ್ನು ಒಂದೇ ಬಿಂದುವಿನಂತೆ ಪರಿಗಣಿಸಬಹುದೆಂದೂ ಮತ್ತು ಆ ಸೇತುವೆಗಳನ್ನು ಅವು ಯಾವ ಯಾವ ಭೂಭಾಗಗಳನ್ನು ಜೋಡಿಸುತ್ತವೆಯೋ ಆ ಎರಡು ಭೂಭಾಗಗಳ ಬಿಂದುಗಳನ್ನು ಕೂಡಿಸುವ ರೇಖೆಗಳಂತೆಯೂ ಪರಿಗಣಿಸಬಹುದೆಂದು ತನ್ನ ಅಭಿಪ್ರಾಯವನ್ನು ಮುಂದಿಟ್ಟ.**





ಅದರಂತೆ ABಗಳ ನಡುವೆ ಎರಡು, ACಗಳ ನಡುವೆ ಎರಡು, ಮತ್ತು AD, BD ಮತ್ತು CDಗಳ ನಡುವೆ ಒಂದೊಂದು ಸೇತುವೆಗಳಿದ್ದು ಅವುಗಳ ಮೊತ್ತ ಏಳಾಗುತ್ತಿತ್ತು. ಹೀಗೆ ಹೆಸರುಗಳನ್ನು ಕೊಟ್ಟಿರುವಾಗ ಪಥವನ್ನು ಗುರುತಿಸುವುದೂ ಸುಲಭ. B-a-A-c-C-d-A-b-B-f-D-g-C ಎನ್ನುವುದು ಒಂದು ಪಥ. ಇಲ್ಲಿ ರೇಖೆ e ಬಳಸದೇ ಉಳಿದುಹೋಯಿತು. ಆದರೆ ಅದನ್ನು ಬಳಸಹೊರಟರೆ ಅಲ್ಲಿಗೆ ತಲುಪಲು ಈಗಾಗಲೇ ಬಳಸಿರುವ ಯಾವುದಾದರೊಂದು ರೇಖೆಯನ್ನು (C ಇಂದ ಹೊರಟು d ಅಥವಾ c) ಮತ್ತೆ ಬಳಸಬೇಕಾಗುತ್ತದೆ. ಈ ವಿಧಾನವನ್ನು ಸಾಮಾನ್ಯಗೊಳಿಸುತ್ತಾ ಆಯ್ಲರ್ ತೋರಿಸಿದ ಇನ್ನೊಂದು ವಿಷಯವೆಂದರೆ - ಪ್ರತಿಯೊಂದು ಬಾರಿ ಒಂದು ಬಿಂದುವನ್ನು ಯಾವುದಾದರೊಂದು ರೇಖೆಯ ಕಡೆಯಿಂದ ತಲುಪಿದಾಗಲೂ ಆ ಬಿಂದುವಿನಿಂದ ಹೊರಹೋಗಲು ಈಗಾಗಲೇ ಬಳಸಿಲ್ಲದ ಮತ್ತೊಂದು ರೇಖೆಯಿರಬೇಕು - ಎನ್ನುವ ಸತ್ಯ. ಈ ಸತ್ಯಕ್ಕೆ ಒಂದು ಅಪವಾದವೂ ಇದೆ. ಮೊದಲು ಪ್ರಾರಂಭಿಸುವ ಮತ್ತು ಕೊನೆಯಲ್ಲಿ ಮುಗಿಸುವ ಬಿಂದುಗಳಿಗೆ ಈ ಕಟ್ಟಳೆ ಅನ್ವಯಿಸುವುದಿಲ್ಲ. ಏಕೆಂದರೆ ಆರಂಭದ ಬಿಂದುವಿಗೆ ಒಳಬರುವ ರೇಖೆಯ ಮತ್ತು ಕೊನೆಯ ಬಿಂದುವಿಗೆ ಹೊರಹೊಮ್ಮುವ ರೇಖೆಯ ಅಗತ್ಯವಿಲ್ಲ.

ಆಯ್ಲರ್ ಪ್ರತಿಯೊಂದು ಬಿಂದುವಿಗೂ "ದರ್ಜೆ" (Degree of a vertex / node) ಎಂಬ ಅಳತೆಯೊಂದನ್ನು ಬೋಧಿಸಿದ. ಎಷ್ಟು ರೇಖೆಗಳು ಒಂದು ಬಿಂದುವಿಗೆ ಅಂಟಿಕೊಂಡಿರುತ್ತವೆಯೋ ಆ ಸಂಖ್ಯೆ ಆ ಬಿಂದುವಿನ ದರ್ಜೆ. ಉದಾಹರಣೆಗೆ, ಈ ಮೇಲಿನ ಕೋನಿಗ್ಸ್‌ಬರ್ಗ್ ನಕ್ಷೆಯಲ್ಲಿ A ಬಿಂದುವಿನ ದರ್ಜೆ ೫ (ಅಂಟಿಕೊಂಡಿರುವ ರೇಖೆಗಳು c, d, a, b, e), ಮತ್ತು B, C, Dಗಳ ದರ್ಜೆ ಮೂರು ಮೂರು.

ಈಗ ಈ ದರ್ಜೆಗಳ ಮೂಲಕ ಮತ್ತೆ ಈ ಸಮಸ್ಯೆಯನ್ನು ನೋಡೋಣ. ಒಂದು ಬಿಂದುವಿನ ದರ್ಜೆ ಎರಡು, ನಾಲ್ಕು, ಆರು, ... ಹೀಗೆ ಸಮಸಂಖ್ಯೆಗಳಾಗಿದ್ದಾಗ ಅದರ ಅರ್ಥ, ಆ ಬಿಂದುವಿನಲ್ಲಿ ಒಂದು ಒಳಬರುವ ರೇಖೆಯನ್ನು ಸರಿದೂಗಿಸುವಂತಹ ಒಂದು ಹೊರಹೋಗುವ ರೇಖೆಯಿದೆಯೆಂದಲ್ಲವೇ? ಹಾಗೆಯೇ, ಒಂದು ಬಿಂದುವಿನ ದರ್ಜೆ ಬೆಸ ಸಂಖ್ಯೆಯಾಗಿದ್ದರೆ (ಒಂದು, ಮೂರು, ಐದು, ...) ಅದರ ಅರ್ಥ, ಆ ಬಿಂದುವಿಗೆ ಹೊರಬರುವ ರೇಖೆಗಳಿಗಿಂತ ಒಂದು ಹೆಚ್ಚು ಒಳಬರುವ ರೇಖೆಯಿದೆಯೆಂದೋ ಅಥವಾ ಒಳಬರುವ ರೇಖೆಗಳಿಗಿಂತ ಒಂದು ಹೆಚ್ಚು ಹೊರಹೋಗುವ ರೇಖೆಯಿದೆಯೆಂದೋ ಆಗಿರುತ್ತದೆ.

ಇನ್ನು ಎಲ್ಲ ಸೇತುವೆಗಳನ್ನು (ರೇಖೆಗಳನ್ನು) ಒಮ್ಮೆ ಮಾತ್ರ ಬಳಸುವ ಪಥವಿರಬೇಕೆಂದಾದರೆ ಪ್ರತಿಯೊಂದು ಬಿಂದುವೂ ಸಮಸಂಖ್ಯೆಯ ದರ್ಜೆಯನ್ನು ಹೊಂದರಬೇಕು ಎನ್ನುವುದು ಪೂರ್ವಭಾವಿ ಷರತ್ತಾಗುತ್ತದೆ. ಇದನ್ನು ಸ್ವಲ್ಪ ಸಡಿಲಗೊಳಿಸಿ, ಎರಡು ಬಿಂದುಗಳಿಗೆ ಬೆಸಸಂಖ್ಯೆಯ ದರ್ಜೆಯನ್ನು ಹೊಂದಲು ರಿಯಾಯಿತಿ ನೀಡಬಹುದು. ಇವುಗಳಲ್ಲೊಂದು ಬಿಂದು ಪಥ ಮೊದಲಾಗುವ ಬಿಂದುವಾಗಿದ್ದರೆ ಇನ್ನೊಂದು ಪಥ ಕೊನೆಗೊಳ್ಳುವ ಬಿಂದುವಾಗುತ್ತದೆ. ಎಲ್ಲವೂ ಸಮಸಂಖ್ಯೆಯ ದರ್ಜೆಯ ಬಿಂದುಗಳಾಗಿದ್ದರೆ ಪಥವು ಮೊದಲ್ಗೊಂಡ ಬಿಂದುವಿನಲ್ಲೇ ಕೊನೆಗೊಳ್ಳುತ್ತದೆ.

**ಈಗ ಕೋನಿಗ್ಸ್‌ಬರ್ಗ್‌ನ ನಕ್ಷೆಯನ್ನು ನೋಡಿದಾಗ, ಈ ಮೊದಲೇ ಅರಿತುಕೊಂಡಂತೆ ಅಲ್ಲಿನ ಬಿಂದುಗಳ ದರ್ಜೆಗಳು ಇಂತಿವೆ. A = ೫, B = ೩, C = ೩, D = ೩. ಅಂದರೆ, ಎರಡಕ್ಕಿಂತ ಹೆಚ್ಚು ಬಿಂದುಗಳಿಗೆ ಬೆಸಸಂಖ್ಯೆಯ ದರ್ಜೆಗಳಿವೆ. ಆದ್ದರಿಂದಲೇ ಯಾವ ಪಥವನ್ನು ಪ್ರಯತ್ನಿಸಿದರೂ ಮತ್ತೆ ಮತ್ತೆ ಯಾವುದಾದರೊಂದು ಉಪಯೋಗಿಸಿದ ಸೇತುವೆಯನ್ನೇ ಉಪಯೋಗಿಸಬೇಕಾದ ಪರಿಸ್ಥಿತಿ ಬರುವುದು. ಆದ್ದರಿಂದಲೇ ಇಲ್ಲಿ ಅತಹದೊಂದು ಪಥ ಅಸಾಧ್ಯ.**

**ಈ ತರ್ಕ ಸರಿಯೆನಿಸಿದ್ದರೂ ನಿಮಗಿನ್ನೂ ಪೂರ್ತಿಯಾಗಿ ಒಪ್ಪಿಗೆ ಮೂಡದಿರಬಹುದು. ಕೆಳಗಿರುವ ಎರಡು ಸಣ್ಣ ವ್ಯತ್ಯಾಸಗಳನ್ನು ಹೊಂದಿದ ಗ್ರಾಫ್‌ಗಳನ್ನು ನೋಡೋಣ. ಎಡಗಡೆಯದ್ದರಲ್ಲಿ ರೇಖೆ e ಮಾಯವಾಗಿದೆ. ಅಂದರೆ ೬ ಸೇತುವೆಗಳು ಮಾತ್ರವಿವೆ. ಈಗ ಇಲ್ಲಿನ ಬಿಂದು ದರ್ಜೆಗಳು A = ೪, B = ೩, C = ೩, D = ೨. ಎರಡು ಬಿಂದುಗಳು ಮಾತ್ರ ಬೆಸದರ್ಜೆಯನ್ನು ಹೊಂದಿವೆ. B-a-A-c-C-d-A-b-B-f-D-g-C ಎನ್ನುವುದು ಇಲ್ಲಿ ಸರಿಯಾದ ಪಥವಾಗುತ್ತದೆ. ಎಲ್ಲ ಸೇತುವೆಗಳನ್ನೂ ಇಲ್ಲಿ ಒಮ್ಮೆ ಮಾತ್ರ ದಾಟುತ್ತಿದ್ದೇವೆ. ಹಾಗೆಯೇ, ಬೆಸದರ್ಜೆಯ B ಬಿಂದುವಿನಿಂದ ಆರಂಭಿಸಿ ಇನ್ನೊಂದು ಬೆಸದರ್ಜೆಯ C ಬಿಂದುವಿನಲ್ಲಿ ಪಥವನ್ನು ಮುಗಿಸುತ್ತಿದ್ದೇವೆ.**

**ಬಲಗಡೆಯ ಸಮಸ್ಯೆಯಲ್ಲಿ h ಮತ್ತು i ಎಂಬ ಎರಡು ಹೊಸ ಸೇತುವೆಗಳು ಬಂದಿದೆ. ಈಗ ಎಲ್ಲ ಬಿಂದುಗಳ ದರ್ಜೆಗಳೂ ಸಮಸಂಖ್ಯೆಯವು. ಇದರಿಂದಾಗಿ B-a-A-c-C-d-A-b-B-f-D-h-A-e-D-g-C-i-B ಎಂಬ ಪಥ ಇಲ್ಲಿ ಒಂದು ಸರಿಯಾದ ಉತ್ತರವಾಗುತ್ತದೆ.**

**ಹೀಗೆ ಕೋನಿಗ್ಸ್‌ಬರ್ಗ್‌ನ ಏಳು ಸೇತುವೆಗಳ ಸಮಸ್ಯೆಗೆ ಆಯ್ಲರನ ತರ್ಕದಿಂದ ಉತ್ತರ ದೊರೆತಿತ್ತು, ಮತ್ತು ಹೊಸ ಗಣಿತದ ಶಾಖೆಯಾದ ಗ್ರಾಫ್ ಥಿಯರಿಯ ಉಗಮವಾಗಿತ್ತು!**








# ಓಹಿಲಯ್ಯನ ಕಥೆ

- ಲೋಕೇಶ್ ನರಸಿಂಹಾಚಾರ್

**"ಸೇವೆಗಾಗಿ ಕಾದ ಹೂವು ಕಸವ ಸೇರಿತೇ... ಬಾಳಿನಾಸೆ ಚಿಗುರಿನಲ್ಲೆ ಬಾಡಿಹೋಯಿತೇ..."**

ಸುಮಾರು ಇಪ್ಪತ್ತು ವರುಶಗಳ ಹಿಂದಿನ ಮಾತು; ಆಗೊಮ್ಮೆ ನಾನು ನನ್ನ ತಾಯಿ ಹಾಗೂ ದೊಡ್ಡಮ್ಮನವರೊಡನೆ – ಬೆಂಗಳೂರಿನ ಬನಶಂಕರಿ ದೇವಸ್ಥಾನಕ್ಕೆ ಹೋಗಿದ್ದಾಗ, ಅಲ್ಲಿ ಆಲಯದ ಎದುರಿದ್ದ ರಸ್ತೆಯಲ್ಲಿ ನಿಂತು ಒಬ್ಬಾಕೆ ಈ ಸಾಲನ್ನು ಹಾಡುತ್ತಿದ್ದಳು. ಬಣ್ಣ ಗುರುತಿಸಲಾಗದಷ್ಟು ಮಾಸಿದ -ಅಲ್ಲಲ್ಲಿ ಹರಿದುಹೋದ- ಸೀರೆ, ಕೆದರಿದ ತಲೆ, ಸ್ನಾನಗಾಣದ ಮೈಯ್ಯಿ, ಅಲ್ಲಲ್ಲಿ ಕಾಣುತ್ತಿದ್ದ ಹುಣ್ಣು, ಗಾಯಗಳ ಗುರುತು... ಅದೇಕೊ ಆ ದಿನದ ಆಕೆಯ ರೂಪ, ಆಕೆ ಹಾಡುತ್ತಿದ್ದ ಈ ಸಾಲು ನನ್ನ ಮನಸ್ಸಿನಲ್ಲಿ ಇಂದಿನವರೆಗೂ ಅಚ್ಚಳಿಯದಂತೆ ಉಳಿದುಬಿಟ್ಟಿದೆ. ಈಗಲೂ ಎಂದಾದರೊಮ್ಮೆ 'ಓಹಿಲೇಶ್ವರ' ಚಿತ್ರದಲ್ಲಿಯ ಈ ಹಾಡನ್ನು ಕೇಳಿದಾಗ ಆ ದೃಶ್ಯ ನನ್ನ ಕಣ್ಣ ಮುಂದೆ ಸುಳಿಯುತ್ತದೆ.

ಆಗಿನ್ನೂ ನನಗೆ ಎಂಟೊ ಒಂಬತ್ತೊ ವಯಸ್ಸು; ನನಗೆ ಕಂಡಿದ್ದನ್ನೂ ಕೇಳಿದ್ದೆಲ್ಲವನ್ನೂ ಸೂಕ್ಷ್ಮವಾಗಿ ಗ್ರಹಿಸಬಲ್ಲ ಶಕ್ಯತೆಯಿದ್ದಿರಲಿಲ್ಲ. ಅದಾಗ್ಯೂ, ಅಂದು ಅಮ್ಮ ಹಾಗೂ ದೊಡ್ಡಮ್ಮ ಆ ಹೆಂಗಸಿನ ಬಗ್ಗೆ ಒಂದೆರಡು ಮರುಕದ ಮಾತುಗಳನ್ನಾಡಿಕೊಂಡದ್ದು ಅಸ್ಪಷ್ಟವಾಗಿ ನೆನಪಿದೆ. ಬಹುಶಃ ಆಕೆಯು ಆ ಮುಂಚೆ ಎಲ್ಲರಂತೆಯೆ ಚೆನ್ನಾಗಿಯೆ ಬಾಳಿ ಬದುಕಿದ್ದವಳು, ಆಗ ಅಂತಹ ದೀನಸ್ಥಿತಿಗೆ ತಲುಪಿದ್ದಳೆನಿಸುತ್ತದೆ. ಅಮ್ಮ ಹಾಗೂ ದೊಡ್ಡಮ್ಮನವರು ಆ ಹೆಂಗಸಿನ ಬದುಕು ಹಿಂದೆ ಹೇಗಿದ್ದಿತು ಎಂದು ಕಂಡಿದ್ದವರೊ ಏನೊ ನನಗೆ ತಿಳಿಯದು.

ಬದುಕೆಂದರೆ ಹೀಗೆಯೇ, ಯಾರದೊ ಬಾಳಿನ ಅಪೂರ್ಣ ಚಿತ್ರಗಳು ನಮ್ಮ ಸ್ಮೃತಿಯಲ್ಲಿ ಅದು ಹೇಗೊ ಬಂದು ಸೇರಿಕೊಂಡುಬಿಡುತ್ತವೆ. ಅದರಲ್ಲಿ ಅವೆಷ್ಟೊ ಎಂದಿಗೂ ಪೂರ್ತಿಯಾಗುವುದೂ ಇಲ್ಲ, ಅವುಗಳ ಗೋಜಲು ಬಗೆಹರಿಯುವುದೂ ಇಲ್ಲ; ಕೊನೆಯವರೆಗೂ ಅವು ಹಾಗೆ ಅಸ್ಪಷ್ಟವಾಗಿಯೆ ಉಳಿದುಬಿಡುತ್ತವೆ, ಅಷ್ಟೆ! ಇದೂ ಅಂಥದ್ದೇ ಕಥೆ.

ಓಹಿಲೇಶ್ವರ ಚಿತ್ರವನ್ನು ನಾನು ಇದುವರೆಗೆ ನೋಡಿರಲಿಲ್ಲ. ಈಗ್ಗೆ ಮೂರು-ನಾಲ್ಕು ವರ್ಷಗಳ ಹಿಂದೆ ಓಹಿಲಯ್ಯನೆಂಬ ಶಿವಭಕ್ತನ ಕುರಿತಾದ ಕನ್ನಡ ರಚನೆಗಳನ್ನು ಓದಿದ್ದೆನಷ್ಟೆ. ಅದೇಕೊ ನೆನ್ನೆ ಸಂಜೆ ಈ 'ಓಹಿಲೇಶ್ವರ' ಚಲನಚಿತ್ರವನ್ನು ನೋಡುವ ಮನಸ್ಸಾಯಿತು; ನೋಡಿದೆ. ಅಂದೆಂದೋ ನಾನು ಕಂಡ ದೃಶ್ಯ, ಈ ಮುಂಚೆ ಓದಿದ್ದ ಓಹಿಲನ ಕಥೆಗಳ ನೆನಪು ಮತ್ತೆ ಮರುಕಳಿಸಿತು; ಅದಕ್ಕೇ ಈ ಮೆಲುಕು:

ಕನ್ನಡದ ಕವಿ ಹರಿಹರನು ತನಗಿಂತ ಪುರಾತನರಾದ, ಹಾಗೂ ತನ್ನ ಸಮಕಾಲೀನರಾದ ಅನೇಕ ಶಿವಭಕ್ತರ ಕಥೆಗಳನ್ನು 'ರಗಳೆ'ಗಳ ರೂಪದಲ್ಲಿ ರಚಿಸಿದ್ದಾನೆ. ಅವುಗಳಲ್ಲಿ "ಓಹಿಲಯ್ಯನ ರಗಳೆ"ಯೂ ಒಂದು.



## ‘ಓಹಿಲಯ್ಯನ ರಗಳೆ’ಯ ಕಥೆಯ ಸಾರಾಂಶವಿಷ್ಟು:

ಉತ್ತರ ದಿಗ್ಭಾಗದಲ್ಲಿ ವಿಲಾಸವತಿಯೆಂಬುದೊಂದು ನಗರ. ನಿ:ಕುಂಭನೆಂಬವವನು ಅಲ್ಲಿಯ ಅರಸು; ಆತನಿಗೆ ಅನೇಕ ವರ್ಷಗಳವರೆಗೆ ಮಕ್ಕಳಿರಲಿಲ್ಲವಾದ್ದರಿಂದ, ಮಹಾಶಿವನನ್ನು ಅನೇಕ ಪ್ರಕಾರಗಳಿಂದ ಉಪಾಸಿಸಿ, ಅವನ ಕೃಪಾಕಟಾಕ್ಷವನ್ನು ಪಡೆದ. ಅದರ ಫಲವಾಗಿ ಅವನು ತನ್ನ ರಾಣಿಯಲ್ಲಿ ಅನಂತ ಸೌಂದರ್ಯದಾಗರವೆನಿಸುವಂತಹ, ಮುದ್ದಾದ ಮಗುವೊಂದನ್ನು ಪಡೆದ. ಆ ಮಗುವಿಗೆ ಓಹಿಲನೆಂಬ ಹೆಸರಿಟ್ಟ.

ಓಹಿಲಯ್ಯನ ವ್ಯಕ್ತಿತ್ವವು ಬಹು ವಿಶೇಷವಾಗಿತ್ತು. ಅತಿ ಮುಗ್ಧನಾದ ಅವನಿಗೆ ಯಾವುದೇ ಲೌಕಿಕ ವಿಚಾರಗಳ ಬಗ್ಗೆ ಬೋಧೆಯಿರಲಿಲ್ಲ. ತಾಯಿಯು ಅವನನ್ನು ಕರೆದು ತಿನ್ನಿಸದ ಹೊರತು, ತನಗೆ ಹಸಿವಾಗಿದೆಯೆಂದು ಅವನಿಗೇ ಹೊಳೆಯದು; ಆ ಪರಿಯ ನಿರ್ಲಿಪ್ತತೆ, ಅವನದ್ದು. ಅಂತೂ, ಯಾವ ಕಷ್ಟಕಾರ್ಪಣ್ಯಗಳನ್ನೂ ಕಂಡರಿಯದಹಾಗೆ ಓಹಿಲನ ತಂದೆತಾಯಂದಿರು ಅವನನ್ನು ಬೆಳೆಸಿದರು.

ಹೀಗಿರಲು, ಅವನಿಗೆ ೧೬ ವರ್ಷವಾಗುವ ವೇಳೆಗೆ ಅವನ ತಂದೆಯು ರೋಗಕ್ಕೆ ತುತ್ತಾಗಿ ಅಸುನೀಗಿದ. ಅರಮನೆಯ ಮನ್ನೆಯರೂ ಸಚಿವರೂ ಸೇರಿ ಓಹಿಲನ ಕೈಯಿಂದ ಅವನ ತಂದೆಯ ಚಿತೆಗೆ ಬೆಂಕಿಯಿರಿಸಿದರು.

ಓಹಿಲನ ತಂದೆಯ ಶವವು ಉರಿದು ಬೂದಿಯಾಯಿತು. ಓಹಿಲನು ಇದರ ಬಗ್ಗೆಯೇನೂ ತಿಳಿಯದೆ ‘ನನ್ನ ತಂದೆ ಯಾವಾಗ ತಿರುಗಿಬರುತ್ತಾನೆ?’ ಎಂದು ತನ್ನ ಸಚಿವರನ್ನು ಕೇಳಿದನು. ಅವನ ಮುಗ್ಧತೆಯನ್ನು ಕಂಡು ಮರುಗಿದ ಅವರು, ಅವನ ತಂದೆ ಸತ್ತುಹೋದನೆಂದೂ ಮತ್ತೆಂದೂ ತಿರುಗಿ ಬಾರನೆಂದೂ ತಿಳಿಸಿದರು. ಮೊದಲ ಬಾರಿಗೆ ಸಾವಿನ ಬಗ್ಗೆ ಕೇಳಿ ತಿಳಿದ ಓಹಿಲನು, “ಎಲ್ಲರಿಗೂ ಹೀಗೇ ಆಗುತ್ತದೆಯೆ? ಎಲ್ಲರೂ ಸಾಯುತ್ತಾರೆಯೆ? ಮುಂದೊಮ್ಮೆ ನಾನೂ ಸಾಯುತ್ತೇನೆಯೆ? …” ಎಂದು ಮುಂತಾಗಿ ಪ್ರಶ್ನಿಸಿದನು. ಆ ನಂತರ, ಹುಟ್ಟಿದ ಎಲ್ಲರಿಗೂ ಸಾವು ನಿಶ್ಚಿತವೆಂದು ಕೇಳಿ ತಿಳಿದ ಬಳಿಕ “ಸಾವನ್ನು ಜಯಿಸುವುದು ಹೇಗೆ?” ಎಂದು ಕಂಡಕಂಡವರನ್ನೆಲ್ಲ ಕೇಳುತ್ತಿದ್ದನು. ಆಗೊಮ್ಮೆ, ಒಬ್ಬ ಭಕ್ತನು, “ಶಿವನನ್ನು ಮೆಚ್ಚಿಸಿ ಒಲಿಸಿಕೊಂಡರೆ ಸಾವನ್ನು ಜಯಿಸಬಹುದು” ಎಂದು ಹೇಳಿದನು. ಓಹಿಲನು ಅದನ್ನು ನಂಬಿ, ತನ್ನ ರಾಜ್ಯವನ್ನೂ ಪರಿವಾರವನ್ನೂ ತೊರೆದು ಶಿವನನ್ನು ಹುಡುಕುತ್ತ ಹೊರಟು, ಕೊನೆಗೆ ಸೌರಾಷ್ಟ್ರದ ಸೋಮನಾಥನ ಆಲಯಕ್ಕೆ ಬಂದು ತಲುಪುತ್ತಾನೆ.

ಅಲ್ಲಿ ನೇರ ಗರ್ಭಗುಡಿಗೆ ಹೋಗಿ ಶಿವಲಿಂಗವನ್ನಪ್ಪಿಕೊಂಡು, ತನ್ನನ್ನು ಸಲಹಬೇಕಾಗಿ ನಾನಾ ಬಗೆಯಿಂದ ಬೇಡಿಕೊಳ್ಳುತ್ತ, ಶಿವನನ್ನು ಮಾತನಾಡಿಸಲು ಪ್ರಯತ್ನಿಸುತ್ತಾನೆ. ಆ ಹೊತ್ತಿಗೆ, ಆಲಯದ ಬಾಗಿಲನ್ನು ಹಾಕಲೆಂದು ಬಂದ ಧರ್ಮಾಧಿಕಾರಿಯು ಅವನನ್ನು ಹೊರಕ್ಕೆಳೆಸಿ, ಆಲಯದ ಬಾಗಿಲು ಹಾಕಿಕೊಂಡು ಹೊರಟುಹೋಗುತ್ತಾನೆ. ಇತ್ತ ಓಹಿಲಯ್ಯನು ಬಗೆಬಗೆಯಾಗಿ ವಿಲಪಿಸುತ್ತ, ಶಿವನನ್ನು ಪ್ರಾರ್ಥಿಸುತ್ತಿರುತ್ತಾನೆ.

# ಜ್ಞಾನ  ಲೋಕ

ಶಿವನು ಆಲಯ ನಿರ್ವಾಹಕನ ಕನಸಿನಲ್ಲಿ ಬಂದು, ತನ್ನ ಭಕ್ತನಾದ ಓಹಿಲಯ್ಯನನ್ನು ದೇವಾಲಯದೊಳಕ್ಕೆ ಬಿಡುವಂತೆ ಆಜ್ಞಾಪಿಸುತ್ತಾನೆ. ಅವನು ತಕ್ಷಣ ಓಡಿಬಂದು, ಆಲಯದ ಬಾಗಿಲು ತೆಗೆಸಿ, ಓಹಿಲಯ್ಯನನ್ನು ಆಲಯದೊಳಕ್ಕೆ ಕಳುಹಿಸಿ, ಕದವಿಕ್ಕುತ್ತಾನೆ. ಆಲಯ ನಿರ್ವಾಹಕನೂ ಅರ್ಚಕರೂ ಅಲ್ಲೆ ಅಡಗಿ ಕುಳಿತು, ಕಿಟಕಿಯೊಂದರ ಮೂಲಕ – ಒಳಗೆ ಏನು ನಡೆಯುವುದೋ ಎಂದು ನೋಡಿದರೆ, ಓಹಿಲಯ್ಯನು ಸೋಮನಾಥನೊಡನೆ ಮಾತಾಡುತ್ತಿದ್ದಾನೆ! ಅಲ್ಲಿದ್ದವರಿಗೆಲ್ಲ ಅರಿವಾಯಿತು – ಓಹಿಲನು ಒಬ್ಬ ಮಹಾಶಿವಭಕ್ತನೆಂದು. ಅವರೆಲ್ಲ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಇತ್ತ, ಆಲಯದಲ್ಲಿ–ಓಹಿಲಯ್ಯನು ಶಿವನ ಬಳಿ, ತನಗೆ ಸಾವನ್ನು ಜಯಿಸುವ ಬಗೆಯನ್ನು ತಿಳಿಸುವಂತೆ ಬೇಡುತ್ತಾನೆ. ಶಿವನು "ಓಹಿಲ, ಹನ್ನೆರಡು ವರ್ಷಗಳಷ್ಟು ಕಾಲ ಪ್ರತಿದಿನವೂ ತಪ್ಪದೆ ನನಗೆ ಧೂಪದ ಸೇವೆಯನ್ನು ಸಲ್ಲಿಸು; ನಿನ್ನನ್ನು ಕೈಲಾಸಕ್ಕೆ ಕರೆಸಿಕೊಳ್ಳುತ್ತೇನೆ" ಎನ್ನುತ್ತಾನೆ.

ಸರಿ, ಮಾರನೆ ದಿನದಿಂದ ಓಹಿಲನು ಧೂಪವನ್ನು ಕೊಂಡು ತರಿಸಿ (ಹಾಗೇ ಬೇರೆಯವರಿಂದ ಸಂಗ್ರಹಿಸಿ, ಹೊರಿಸಿ ತಂದು) ಸೋಮನಾಥನಿಗೆ ಧೂಪದ ಸೇವೆಯನ್ನು ಮಾಡುತ್ತಾನೆ. ಮುಂದೆ ಓಹಿಲನ ಸಚಿವರ ಮೇಲ್ವಿಚಾರಣೆಯಲ್ಲಿ ಅವನ ರಾಜ್ಯವೂ ವಿಸ್ತರಿಸಿ, ಸಂಪದ್ಭರಿತವಾಗುತ್ತದೆ. ಅವರೆಲ್ಲ ಓಹಿಲಯ್ಯನ ಸೇವೆಗೆ ಸಹಕಾರ ನೀಡುತ್ತಾರೆ.

ಹಾಗೆ ಹನ್ನೆರಡು ವರ್ಷಗಳು ಕಳೆಯುತ್ತವೆ. ಆ ನಂತರ ಓಹಿಲಯ್ಯನು ಶಿವನಿಗೆ, ತನ್ನನ್ನು ಕೈಲಾಸಕ್ಕೆ ಕರೆಸಿಕೊಳ್ಳುವಂತೆ ಕೇಳುತ್ತಾನೆ. ಅದಕ್ಕೆ ಶಿವನು "ನಿನ್ನ ರಾಜ್ಯವು ಮುಂಚೆಗಿಂತ ವಿಸ್ತಾರವಾಯಿತು, ಸಂಪದ್ಭರಿತವಾಯಿತು. ನೀನು ಹೆಚ್ಚಿನ ಸುಖವಂತನಾದೆ. ಹೊನ್ನು ಕೊಟ್ಟು ಅನ್ಯರಿಂದ ಹೊರಿಸಿ ತಂದ ಧೂಪವನ್ನು ಹಾಕಿ ಸೇವೆ ಮಾಡಿದರೆ ನಿನ್ನ ಪುಣ್ಯಾರ್ಜನೆ ಹೇಗಾದೀತು? ಆ ಪುಣ್ಯವೆಲ್ಲ ಆಯಾ ವ್ಯಕ್ತಿಗಳಿಗೆ ಸೇರಿಹೋಯಿತು. ಇನ್ನು ಮುಂದಾದರೂ ನೀನೇ ಹೋಗಿ ಗುಗ್ಗುಳವನ್ನು ಕಡಿದು ತಂದು, ಮತ್ತೆ ಹನ್ನೆರಡು ವರ್ಷ ನನಗೆ ಧೂಪವನ್ನರ್ಪಿಸು." ಎನ್ನುತ್ತಾನೆ.

ಮುಂದೆ, ಓಹಿಲಯ್ಯನು – ಕಲ್ಲುಮುಳ್ಳುಗಳನ್ನು ಲೆಕ್ಕಿಸದೆ ಕಾಲ್ನಡಿಗೆಯಲ್ಲಿ ಸಾಗಿ, ದಾರಿಯಲ್ಲಿ ಎದುರಾದ ಹಲವಾರು ಕ್ರೂರಮೃಗಗಳನ್ನು ಕಾಣುತ್ತ ಮಲಯಾಚಲವನ್ನು ತಲುಪಿ, ಅಲ್ಲಿ ತನ್ನ ಸರಿತೂಕದಷ್ಟು ಗುಗ್ಗುಳವನ್ನು ಕಡಿದು, ಅದನ್ನು ಕಾವಡಿಯೊಂದರಲ್ಲಿ ಹೊತ್ತುಕೊಂಡು ಸೌರಾಷ್ಟ್ರಕ್ಕೆ ಬಂದು, ಸೋಮನಾಥನಿಗೆ ಧೂಪದ ಸೇವೆಯನ್ನು ಸಲ್ಲಿಸಿದ.

ಹೀಗೆ ಓಹಿಲಯ್ಯನು ಪ್ರತಿನಿತ್ಯವೂ ಮಲಯಾಚಲದಿಂದ ತಂದ ಧೂಪದಿಂದ ಶಿವನನ್ನರ್ಚಿಸಿದ. ಕೊನೆಗೆ ಶಿವನು ನಂದಿಯನ್ನೂ ಇನ್ನಿತರ ಪ್ರಮಥರನ್ನೂ ಕಳಿಸಿ ಓಹಿಲಯ್ಯನನ್ನು ಕೈಲಾಸಕ್ಕೆ ಕರೆಸಿಕೊಂಡ; ಅವನಿಗೆ ಶಿವಗಣದ ಪದವಿಯನ್ನಿತ್ತ.



## ಸೋಮದೇವನ 'ಉದ್ಭಟಕಾವ್ಯ'ದಲ್ಲಿ:

೧೩ನೇ ಶತಮಾನದಲ್ಲಿದ್ದ **ಸೋಮದೇವ**ನೆಂಬ ಅರಸನು ರಚಿಸಿರುವ **'ಉದ್ಭಟಕಾವ್ಯ'**ವೆಂಬ ಕೃತಿಯಲ್ಲಿಯೂ ಓಹಿಲಯ್ಯನ ಕಥೆಯಿದೆ. **ಭಲ್ಲಕೀ** ನಗರದ ಅರಸು **ಉದ್ಭಟದೇವ** ಕೂಡ ಮಹಾ ಶಿವಭಕ್ತ. ಒಮ್ಮೆ ಅವನೂ ಅವನ ಹೆಂಡತಿಯೂ (**ಸೌಂದರವತಿ**) ಪಗಡೆಯಾಡುತ್ತಿದ್ದಾಗ, ಉದ್ಭಟನು ಅಕಾರಣವಾಗಿ ನಗುತ್ತಾನೆ. ಅದನ್ನು ಕಂಡು ಮುನಿದ ಸೌಂದರವತಿಯು, ನೀವು ನಕ್ಕ ಕಾರಣವೇನು ಎಂದು ಕೇಳಿದ್ದಕ್ಕೆ ಉದ್ಭಟನು, "ಓಹಿಲಯ್ಯನು ಹನ್ನೆರಡು ವರ್ಷ ಪರ್ಯಂತ ಶಿವನಿಗೆ ಧೂಪಾರಾಧನೆಯನ್ನು ಸಲ್ಲಿಸಿ, (ಈಗ) ಒಬ್ಬನೇ ಕೈಲಾಸಕ್ಕೆ ಹೋಗುತ್ತಿದ್ದಾನೆ. ಅದನ್ನು ನೆನೆದು ನಗು ಬಂತು. ತನ್ನನ್ನು ನಂಬಿದವರನ್ನೂ ಪರಿವಾರದವರನ್ನೂ ಜೊತೆಗೆ ಕರೆದೊಯ್ಯದೆ ತಾನೊಬ್ಬನೆ ಹೋಗುವುದು ಅದೇನು ಹೆಚ್ಚೆ? ಅದಕ್ಕೆ ನಗು ಬಂತು" ಎನ್ನುತ್ತಾನೆ.

ಆಗ ಸೌಂದರವತಿಯು ಓಹಿಲಯ್ಯನ ಕಥೆಯನ್ನು ತನಗೆ ತಿಳಿಸಬೇಕೆಂದು ಉದ್ಭಟನನ್ನು ಕೇಳಿದಾಗ, ಅವನು ಓಹಿಲಯ್ಯನ ಚರಿತ್ರೆಯನ್ನು ಸೌಂದರವತಿಗೆ ನಿರೂಪಿಸುತ್ತಾನೆ. ಈ ಭಾಗದಲ್ಲಿ ಓಹಿಲಯ್ಯನ ಕಥೆಯನ್ನು ಸೋಮದೇವನು 'ಉದ್ಭಟಕಾವ್ಯ'ದಲ್ಲಿ ವರ್ಣಿಸಿದ್ದಾನೆ (ಹರಿಹರನ 'ಉದ್ಭಟಯ್ಯನ ರಗಳೆ' ಯಲ್ಲಿಯೂ ಭಾಗಶಃ ಹೀಗೆಯೇ ಇದೆ).

ಇಲ್ಲಿ ಬರುವ ಕಥೆ ಬಹುಪಾಲು ಹರಿಹರನ ರಗಳೆಯ ಕಥೆಯನ್ನೇ ಅನುಸರಿಸುತ್ತದೆ. ವಿಲಾಸನಗರದ ಅರಸ ನಿಷ್ಕುಂಭರಾಜನ ಮಗ ಓಹಿಲ. ಅವನು ಜನ್ಮತಃ ಮಹಾಮುಗ್ಧ. ತನ್ನ ತಂದೆಯ ಸಾವಿನ ದಿನ ಅವನಿಗೆ ಸಾವು ಎಂದರೇನು ಎಂದು ತಿಳಿಯುತ್ತದೆ. ಇಲ್ಲಿ ಕೂಡ ಓಹಿಲನು 'ಸಾವನ್ನು ಜಯಿಸುವ ಬಗೆ ಹೇಗೆ?' ಎಂದು ಹಲವರನ್ನು ಕೇಳಿ, ಕೊನೆಗೆ ಶಿವನನ್ನು ಶರಣುಹೊಕ್ಕು ಸೌರಾಷ್ಟ್ರಕ್ಕೆ ಬರುತ್ತಾನೆ. ಮುಂದಿನ ಕಥೆಯೂ ಬಹುತೇಕ 'ಓಹಿಲಯ್ಯನ ರಗಳೆ'ಯಲ್ಲಿದ್ದಂತೆಯೇ ಇದೆ.

ಆದರೆ ಸ್ವತಃ ಓಹಿಲನೇ ಮಲಯಪರ್ವತಕ್ಕೆ ಹೋಗಿ, ತನ್ನ ಸರಿಭಾರದಷ್ಟು ಗುಗ್ಗುಳವನ್ನು ಹೊತ್ತು ತರಲು ಮೊದಲು ಮಾಡಿದ ಮೇಲೆ, ಆಲಯದ ಅರ್ಚಕರೂ ನಿರ್ವಾಹಕರೂ ಕೂಡಿ ಓಹಿಲಯ್ಯನಿಗೆ ನಾನಾ ರೀತಿಯ ಉಪದ್ರವಗಳನ್ನು ತಂದೊಡ್ಡುತ್ತಾರೆ. ಓಹಿಲನಿಗೆ ಸೌರಾಷ್ಟ್ರದಲ್ಲಿ ಎಲ್ಲಿಯೂ ತಿನ್ನಲು ಏನೂ ಸಿಗದಹಾಗೆ ಮಾಡುತ್ತಾರೆ. ಅನಂತರದ ದಿನಗಳಲ್ಲಿ, ಆಲಯದ ಪೂಜೆಗೆ ಉಪಯೋಗಿಸಿ ಎಸೆದ ನಿರ್ಮಾಲ್ಯ ಪತ್ರಗಳನ್ನೇ ತಿಂದು ಓಹಿಲನು ಹೊಟ್ಟೆಹೊರೆಯಬೇಕಾಗುತ್ತದೆ. ಹೀಗೆ ಕೆಲವು ದಿನಗಳು ಕಳೆದುವು. ಓಹಿಲನು ನಿರ್ಮಾಲ್ಯ ಪತ್ರಗಳನ್ನೂ ಸೇವಿಸದ ಹಾಗೆ ಮಾಡಲು ಸಂಚು ರೂಪಿಸಿದ ಅರ್ಚಕರು, ಪ್ರತಿದಿನವೂ ನಿರ್ಮಾಲ್ಯವನ್ನೆಲ್ಲ ಸುಟ್ಟುಹಾಕುತ್ತಿದ್ದರು. ಮುಂದೆ ಓಹಿಲನು ಆ ಬೂದಿಯನ್ನೇ ತಿಂದು ಬದುಕಬೇಕಾಗುತ್ತದೆ.

ಹೀಗೆ ಹನ್ನೆರಡು ವರ್ಷ ಕಳೆಯುತ್ತವೆ; ಒಂದು ದಿನ ಓಹಿಲನು ಮಲಯಾಚಲಕ್ಕೆ ಹೋಗಿ, ತನ್ನ ಸರಿಭಾರದ ಗುಗ್ಗುಳವನ್ನು ಹೊತ್ತುತರುತ್ತಿದ್ದಾಗ ಅವನ ಎಡಗಾಲಿಗೊಂದು ಮುಳ್ಳು ತಾಕುತ್ತದೆ.




ಹಾಗಿದ್ದೂ ಅವನು ನಡೆಯಲು ಪ್ರಯತ್ನಿಸುತ್ತಾನಾದರೂ ಅತೀವ ನೋವಿನಿಂದ ನರಳುವಂತಾಗುತ್ತದೆ. ಹೋಗಲಿ, ತನ್ನ ಕಾಲಿಗಂಟಿದ ಮುಳ್ಳನ್ನು ಕೈಯಿಂದ ಕಿತ್ತುಹಾಕುವಂತೆಯೂ ಇಲ್ಲ. ಕಾಲನ್ನು ಮುಟ್ಟಿದರೆ ಶಿವನಿಗೆ ಅರ್ಪಿಸಬೇಕಾದ ಧೂಪವನ್ನು ಹೊರುವಂತಿಲ್ಲ, ಅದು ಅಪಚಾರವಾಗುತ್ತದೆ! ಮುಂದೆ ಹೇಗೆಂದು ಬಗೆಗಾಣದೆ ನಿಲ್ಲುತ್ತಾನೆ, ಓಹಿಲಯ್ಯ. ಆಗ ಶಿವನು ಒಬ್ಬ ಬೇಡನ ರೂಪದಲ್ಲಿ ಬಂದು, ತಾನು ಓಹಿಲನ ಕಾಲಿಗಂಟಿದ ಮುಳ್ಳನ್ನು ತೆಗೆಯುತ್ತೇನೆ ಎನ್ನುತ್ತಾನೆ. ಒಂದು ಚಿಮ್ಮಟದಿಂದ ಓಹಿಲನ ಕಾಲಿನ ಮುಳ್ಳನ್ನು ತೆಗೆದು, ಬೇಡನು ಅದೃಶ್ಯನಾಗುತ್ತಾನೆ. ನಡೆದ ಸಂಗತಿಯಿಂದ ವಿಸ್ಮಯಗೊಂಡ ಓಹಿಲನು, ಪೂಜೆಗೆ ತಡವಾದೀತೆಂಬ ಭಯದಿಂದ ಬೇಗಬೇಗ ನಡೆದು ಸೋಮನಾಥನ ಆಲಯವನ್ನು ತಲುಪುತ್ತಾನೆ.

ಅವನು ತಾನು ಹೊತ್ತು ತಂದ ಗುಗ್ಗುಳವನ್ನು ಪಕ್ಕದಲ್ಲಿರಿಸಿ, ಧೂಪವನ್ನು ಹಾಕಲು ಕೆಂಡವನ್ನು ಸಿದ್ಧಪಡಿಸಲು ತೊಡಗುತ್ತಾನೆ. ಈ ಸಮಯಕ್ಕೆ ಕಾದು ಅಡಗಿ ಕುಳಿತಿದ್ದ ಆಲಯ ನಿರ್ವಾಹಕರು ಗುಗ್ಗುಳವನ್ನು ಅಪಹರಿಸಿ ಬಚ್ಚಿಡುತ್ತಾರೆ. ಓಹಿಲನು ಬಂದು ನೋಡುತ್ತಾನೆ, ತಾನು ಹೊತ್ತು ತಂದ ಗುಗ್ಗುಳವು ಕಾಣಿಸುವುದಿಲ್ಲ! ಇನ್ನು ಈಗ ಮತ್ತೆ ಮಲಯಾಚಲಕ್ಕೆ ಹೋಗಿ ತರೋಣವೆಂದರೆ ಅಷ್ಟು ಸಮಯವಿಲ್ಲ. ಏನು ಮಾಡುವುದೆಂದು ತೋಚದೆ, ಕೊನೆಗೆ ಧೂಪದ ಬದಲಿಗೆ ತಾನೇ ಬೆಂಕಿಗೆ ಆಹುತಿಯಾಗುವುದಾಗಿ ನಿಶ್ಚಯಿಸುತ್ತಾನೆ, ಓಹಿಲಯ್ಯ. ಹಾಗೆ ನಿರ್ಧರಿಸಿ, ಹಚ್ಚಿದ್ದ ಬೆಂಕಿಯೊಳಗೆ ಪ್ರವೇಶಿಸಿ ಕುಳಿತುಬಿಡುತ್ತಾನೆ. ಓಹಿಲಯ್ಯನ ಈ ಪರಿಯ ಭಕ್ತಿಯನ್ನೂ ನಿಷ್ಠೆಯನ್ನೂ ಕಂಡು ಮೆಚ್ಚಿದ ಶಿವನು ಅವನನ್ನು ಕೈಲಾಸಕ್ಕೆ ಕರೆಸಿಕೊಳ್ಳುತ್ತಾನೆ. ಹಾಗೆ ಓಹಿಲನು ಒಂದು ಮಂಟಪದಲ್ಲಿ ಕುಳಿತು ಕೈಲಾಸದ ಕಡೆಗೆ ಹೊರಟಿರುವುದನ್ನು ಉದ್ಭಟದೇವನು ತನ್ನ ಹೆಂಡತಿ ಸೌಂದರವತಿಗೆ ತೋರಿಸುತ್ತಾನೆ.

## ಸಿನಿಮಾದಲ್ಲಿ ಹೇಗಿದೆ?

ಡಾ|| ರಾಜ್ ಕುಮಾರ್ ಅವರು ಮುಖ್ಯಪಾತ್ರದಲ್ಲಿ ನಟಿಸಿರುವ ಓಹಿಲೇಶ್ವರ ಸಿನಿಮಾದಲ್ಲಿಯ ಕಥೆ ಸಾಕಷ್ಟು ಭಿನ್ನವಾಗಿದೆ. ಬಹುಶಃ ಸಿನಿಮಾ ಮಾಡಲು ಹೊಂದುವಂತೆ ಹಲವಾರು ಪಾತ್ರಗಳನ್ನೂ ಸನ್ನಿವೇಶಗಳನ್ನೂ ಜೋಡಿಸಿ ಹೆಣೆದಿದ್ದಾರೆನಿಸುತ್ತದೆ. ಆದರೆ, ಸೂಕ್ಷ್ಮವಾಗಿ ಗಮನಿಸಿದಾಗ (ಹಾಗೂ ಮತ್ತೊಮ್ಮೆ ಉದ್ಭಟಕಾವ್ಯದ ಕಡೆ ಕಣ್ಣಾಡಿಸಿದ ಮೇಲೆ) ಸಿನಿಮಾದ ಬಹುಪಾಲನ್ನು ಸೋಮದೇವನ "ಉದ್ಭಟಕಾವ್ಯ"ದ ಕಥೆಯನ್ನು ಅನುಸರಿಸಿ, ಅದೇ ಕೃತಿಯಲ್ಲಿಯ ಬೇರೆ ಕೆಲವು ವಿವರಗಳನ್ನು ತಕ್ಕಂತೆ ಮಾರ್ಪಡಿಸಿ ಈ ಚಿತ್ರವನ್ನು ನಿರ್ಮಿಸಿರುವಂತೆ ತೋರುತ್ತದೆ.

ಹರಿಹರನ 'ಉದ್ಭಟಯ್ಯನ ರಗಳೆ'ಪ್ರಕಾರ ಓಹಿಲನು ಉದ್ಭಟನಿಗಿಂತ ಹಿಂದಿನ ಕಾಲದವನಂತೆ ಭಾಸವಾಗುತ್ತದೆ. ಆದರೆ 'ಉದ್ಭಟಕಾವ್ಯ' ಹಾಗೂ 'ಓಹಿಲೇಶ್ವರ' ಚಿತ್ರದಲ್ಲಿ ಅವರಿಬ್ಬರೂ ಸಮಕಾಲೀನರೆಂಬಂತೆ ಚಿತ್ರಿಸಲಾಗಿದೆ. ಸಿನಿಮಾದಲ್ಲಾದರೆ ಉದ್ಭಟನ ಪಾತ್ರವು ಮುಖ್ಯವಾಹಿನಿಗೆ ಅನುಕೂಲವಾಗುವಂತೆಯೇ ಚಿತ್ರಿತವಾಗಿದೆ.

# Musings from Munich

\- Venkateshprasanna

I had an opportunity to visit the German city of Munich for a week as part of a work assignment last month and on one of the days during the weekend, found some time to explore the city that has a history dating all the way back to **1158 CE**. Munich has served as the capital of **Bavaria** and has rich heritage. First thing that caught my attention, though, is the **Englischer Garten (English Garden)** - one of the largest urban parks in the world with an area of 910 acres, right at the centre of the city. The park was bathed in green as it was the beginning of summer and taking a stroll there is an extremely peaceful experience, with the Isar river flowing through silently (fig 1) and other natural and artificially created lakes to explore along the way. There were many a swans, ducks and mallards in the lakes (figs 2-5), adding to the beauty.

1















Up next was a stroll to the old city center of Munich, known popularly as **Marienplatz**. The place is named after a column hosting a golden statue of **Virgin Mary** on top (fig 7), which was erected in **1638 CE** to commemorate the end of Swedish occupation of the capital of Bavaria. At the backdrop of Mary's column is the **New City Hall** (Neues Rathaus) (fig 6) and adjacent to that is the **Old City Hall** (Altes Rathaus), both imparting a great Gothic look to the surroundings. The statue of Virgin Mary was commissioned by the **Duke Elector Maximilian I of Bavaria**, whose majestic statue can also be seen not too far away from the city center (fig 8). Also close to Marienplatz is the famous **Viktualienmarkt** - an original farmers' market where fresh fruits, vegetables, flowers, fruit juices and various types of food and beverages are available in the old city setting.





Also visible from the city center is the iconic image of Munich, the **Frauenkirche** (Cathedral of the Dear Lady). This church is considered the symbol of the Bavarian capital and is also popularly known as **Münchner Dom** (fig 10). The church was constructed in 12th century, with the two signature domes getting added in **1488 CE**. It suffered severe damages towards the end of World War II due to the aerial strikes by the Allied Forces. However, restoration work began soon after the war, and the monument was brought back to the state we see today by **1994**. The Frauenkirche stands as a glowing example of heritage preservation and restoration.

It is also easy to catch a sight of the majestic **Nymphenburg Palace** (fig 9), the main summer residence of the former rulers of Bavaria of the House of Wittelsbach, as well as that of the splendid **Isar River** roaring through the city (fig 11).












Last stop was the **Olympiapark**, the Olympic Park constructed for the 1972 Summer Olympics. Right at its entrance is a picturesque lake surrounded with lots of greenery (fig 12), leading to the various sporting facilities from there. The best way to view all of them is from **Olympiaturm**. It is the communication center tower, one of the main attractions at the park, from whose very top not only a bird's eye view of the entire Olympic facility can be obtained (fig 13), but also of the entire city of Munich (fig 14). It has an overall height of 291 meters. Also visible from its top is the famous 4 Cylinder Tower, the headquarters of BMW automobiles (fig 15).

Unfortunately, the Olympic village also reminds us of the murder of eleven Israeli team members during the games by the Palestinian terrorists. There is also a memorial set up there to remember and to pay respect to those deceased souls.












ಜ್ಞಾನ  ಲೋಕ

# ಬಾ ಮಳೆಯೇ ಬಾ...

- ರಮ್ಯಾ ಶಿವಪ್ರಸಾದ್

## ಬಾ. ಮಳೆಯೇ ಬಾ

ಅಬ್ಬಬ್ಬಾ ಏನಿದು ಶಿವ! ಶಿವರಾತ್ರಿಯ ದಿನ ಕಳೆಯಿತು, ಶಿವ ಶಿವ ಎನ್ನುವಷ್ಟರಲ್ಲಿ ಬಿಸಿಲಿನ ತಾಪಮಾನ ಶುರುವಾಗಿತ್ತು. ಅದರಲ್ಲೂ ಪರವಾಗಿಲ್ಲ, ಬೇಸಿಗೆ ಎಂದೊಡನೆ ಮನಸ್ಸಿಗೆ ತಂಪೆರೆಯಲು ಬರುವುದು ಹಣ್ಣುಗಳ ರಾಜ ಮಾವು. ಅದರ ಸವಿ ಸವಿಯಲು ಏಪ್ರಿಲ್‌ಗೆ ಕಾಯ ಕುಳಿತಿದ್ದಾಯಿತು. ಏಪ್ರಿಲ್ ಬಂತು ಅದರ ಹಿಂದಿನ ವರ್ಷದಂತೆ ಈ ವರ್ಷ ಮಾವಿನ ಫಲ ಅಷ್ಟಾಗಿರಲಿಲ್ಲ. ಆರಂಭದಲ್ಲಿ ಹುಳಿ ಮಾವುಗಳ ಅಬ್ಬರ. ಮನಸ್ಸಿಗೆ ಏನೋ ಕಸಿವಿಸಿ. ಬಿಸಿಲಿನ ಧಗೆ ದಿನದಿಂದ ದಿನಕ್ಕೆ ಏರುತ್ತಲೇ ಇರುವಾಗ, ಮೇ ಶುರುವಾದಾಗ ಬಿಸಿಲಿನ ಅಬ್ಬರಕ್ಕೆ ಬಾಯಿ ಬಿಡುವಂತಾಯಿತು. ಜನರೆಲ್ಲ, ಅಯ್ಯೋ ದೇವರೇ! ಈ ಮಳೆ ಯಾವಾಗ ಬರುತ್ತೋ, ಮಳೆ ಕರುಣಿಸು ಪರಮಾತ್ಮ ಎನ್ನುತ್ತಾ....

ಎಷ್ಟೋ ವರ್ಷಗಳಿಂದ ಮಾನವ ಕುಲವಲ್ಲದೇ ಪ್ರಕೃತಿಯು ಯಾವ ಋತುವನ್ನು ಈ ವೇಳೆ ನೇರವಾಗಿ ಒಪ್ಪಿಕೊಳ್ಳುವುದಿಲ್ಲ. ಬೇಸಿಗೆ ಬಂದರೆ ಬಿಸಿಲೆಂದು, ಮಳೆ ಇದ್ದರೆ ಅಯ್ಯೋ ಹಾಳು ಮಳೆ ಎಂದು, ಚಳಿಗೆ ದೇವರೇ ಚಳಿ ಎಂತಹ ಗೋಳಾಗುತ್ತದೆಂದೇ ಹೊರತು ನೇರ ವರ್ತಮಾನದ ಸ್ಥಿತಿಗೆ ಹೊಂದಿಕೊಳ್ಳುವುದಿಲ್ಲ.

ಅದರಲ್ಲೂ ಕಳೆದ ವರ್ಷ ಭೂಮಿ ಕಾಯ್ದು ಹೋದಾಗ ಸಂಜೆ ವೇಳೆಗೆ ಬಿಸಿಲಿನ ಬೇಗೆಯನ್ನು ತಂಪು ಮಾಡಲು ತುಂತುರು ಹನಿಗಳು ಮಳೆಯಾಗಿ ಭೂಮಿಯನ್ನು ತಣಿಸುತ್ತಿತ್ತು. ಕಳೆದ ವರ್ಷದ ಬೇಸಿಗೆಯಲ್ಲಿ ನಾವುಗಳು ನಿರೀಕ್ಷಿಸುತ್ತಿದ್ದಂತೆಯೇ ಸಂಜೆ ವೇಳೆಗೆ ಮಳೆ ಪ್ರಾರಂಭವಾಗುತ್ತಿತ್ತು. ಆದರೆ ಈ ವರ್ಷ ಯಾಕೋ ವರುಣದೇವ ಕೋಪಿಸಿಕೊಂಡವನಂತೆ ಒಂದೋ, ಎರಡೋ ಹನಿ ಬಿಡಿ ಮಳೆಗಳಾಗಿರಬಹುದೇನೋ ಅಷ್ಟೇ!

ಅಂತೂ ಮೇ ಕಳೆದು ಜೂನ್ ಬಂತು. ಮುಂಗಾರನ್ನು ಎದುರು ನೋಡುತ್ತಿದ್ದ ಜನ, ರೈತರಿಗೆ ಯಾಕೋ ಈ ವರ್ಷದ ಆರಂಭದಲ್ಲೇ ಹೊಡೆತ. ಮುಂಗಾರು ಅಧಿಕೃತವಾಗಿ ಕೇರಳದ ಕರಾವಳಿ ತೀರಗಳಿಗೆ ಅಪ್ಪಳಿಸಿದರೂ ಯಾಕೋ ಮಳೆಯು ಆರ್ಭಟಿಸುತ್ತಿಲ್ಲ, ಹನಿಗಳು ಶುರುವಾಗಿಲ್ಲ.

ನಮ್ಮ ಭಾರತದಲ್ಲಿ ರೈತರು ಶೇಕಡಾ 75 ರಷ್ಟು ಅವಲಂಬಿತರಾಗಿರುವುದು ಈ ನಾಲ್ಕು ತಿಂಗಳು ಬೀಳುವ ಮಳೆಯನ್ನಾಧರಿಸಿ ಬೆಳೆಯುವ ಬೆಳೆಗಳಿಗೆ. ನಮ್ಮ ದೇಶದ ಆರ್ಥಿಕತೆಯು ಕೃಷಿಯ 18% ಭಾಗವನ್ನು ಅವಲಂಬಿಸಿದ್ದು, ಈ ಮಳೆಯನ್ನೇ ಆಧಾರವನ್ನಾಗಿಟ್ಟುಕೊಂಡ ಕೃಷಿ, ದೇಶದ ಕೈಗಾರಿಕಾ ವಲಯ ತೀವ್ರ ಹೊಡೆತವನ್ನು ಅನುಭವಿಸುತ್ತವೆ.

ಕಳೆದ ಆರು ವರ್ಷಗಳಲ್ಲಿ ಭಾರತದಲ್ಲಿ ವಾಡಿಕೆಯಂತೆ ಬೀಳುವ ಮಳೆಯ ಅಭಾವವನ್ನು ಪರಿಶೀಲಿಸುವುದಾದರೆ.

| ವರ್ಷ | ಮಳೆ (ಮಿ.ಮೀ) | ಕುಂಠಿತ |
|---|---|---|
| 2013 | 937.4 | 6% |
| 2014 | 781.7 | -12% |
| 2015 | 7658 | -14% |
| 2016 | 864.4 | -3% |
| 2017 | 887.5 | -0.35% |
| 2018 | 804 | -9.40% |

ವರ್ಷದಿಂದ ವರ್ಷಕ್ಕೆ ಮಳೆಯ ಪ್ರಮಾಣ ಕಡಿಮೆಯಾಗುತ್ತಿದೆ. ಹವಾಮಾನ ಇಲಾಖೆಯ ವರದಿ ಪ್ರಕಾರ ಕಳೆದ ಬಾರಿಗೆ ಹೋಲಿಸಿದರೆ ಈ ವರ್ಷ ಶೇ. 43 ರಷ್ಟು ಮಳೆ ಕೊರತೆ ಕಾಣುತ್ತಿದೆ.

ಮಾನ್ಸೂನಿನ ಮುಂದಗತಿ ಚಲನೆ, ಬೋರ್‌ವೆಲ್‌ಗಳ ಕೊರೆಯುವಿಕೆಗಳಿಂದಾಗಿ ಅಂತರ್ಜಲ ಪಾತಾಳಕ್ಕಿಳಿದಿದೆ. ಜಲಾಶಯಗಳಲ್ಲಿ ನೀರಿನ ಮಟ್ಟ ಡೆಡ್ ಸ್ಟೋರೇಜ್ ತಲುಪಿದೆ. ಜಲಾಶಯಗಳಲ್ಲಿ ನೀರಿನ ಪ್ರಮಾಣ ಸಂಗ್ರಹ ಸಾಮರ್ಥ್ಯದ ಶೇ. 80ರಷ್ಟು ಕಡಿಮೆಯಾಗಿದೆ. ಕೆಲವು ರಾಜ್ಯಗಳ ಜಲಾಶಯಗಳು ಈಗಾಗಲೇ ಸಂಪೂರ್ಣವಾಗಿ ಬರಿದಾಗಿವೆ. ಇದರಿಂದ ದೇಶದ ಅರ್ಧಭಾಗ ನೀರಿನ ಕೊರತೆಯಿಂದ ಬಳಲುತ್ತಿದೆ. ಹೀಗೆ ಕೈ ಕೊಡುತ್ತಿರುವ ಮಳೆಯಿಂದ ಉಂಟಾಗಿರುವ ಪರಿಸ್ಥಿತಿ ಮುಂದೆ ಎಲ್ಲಿಗೆ ತಲುಪುವುದೋ ಎನ್ನುವುದು ಗಂಭೀರ ಪ್ರಶ್ನೆ?

ಹಾಗಾಗಿ ಮಳೆಗಾಗಿ ದೇವರ ಮೊರೆ ಹೋಗುವುದೇ ಕೊನೆಯ ದಾರಿ.

ಬಾ. ಮಳೆರಾಯ ಧರೆಗಿಳಿದು
ಇಳೆಯ ಧಗೆಯನು ತಂಪಾಗಿಸು
ಎಲ್ಲರ ಮನವನು ತಣಿಸು
ನದಿ, ಕೆರೆ, ಹಳ್ಳಗಳಿಗೆ ಮರುಜೀವ ಕರುಣಿಸು
ಮರಗಳಿಗೆ ಹಸಿರು ಬಣ್ಣದ ಮೆರುಗನು
ಬಾ. ಮಳೆರಾಯ ಬಾ.......

ರಮ್ಯ ಶಿವಪ್ರಸಾದ್.



# ಪರಿಸರ ಶುದ್ಧವಾಗಿದ್ದರೆ ನಾಡಿನ ಪ್ರಗತಿ

- ಶಿವಪ್ರಸಾದ್

ಕೆಲವು ದಿನಗಳ ಹಿಂದೆ ಮೈಸೂರಿನಿಂದ ಬೆಂಗಳೂರಿಗೆ ವಾಪಸ್ಸಾಗುತ್ತಿದ್ದೆ. ನನ್ನ ಕಾರನ್ನು ಒಂದು ಪ್ರವಾಸಿ ಬಸ್ಸು ಹಿಂದಿಕ್ಕಿತು. ಆ ಬಸ್ಸಿನಲ್ಲಿ ಯಾವುದೊ ಕಾಲೇಜು ವಿದ್ಯಾರ್ಥಿಗಳು ಪ್ರವಾಸದಿಂದ ಹಿಂತಿರುಗುತ್ತಿದ್ದರೆಂದು ಕಾಣುತ್ತದೆ. ಬಸ್ಸಿನಲ್ಲಿದ್ದ ವಿದ್ಯಾರ್ಥಿಗಳು ತಮ್ಮ ಪ್ರವಾಸವನ್ನು ಅನುಭವಿಸುತ್ತಾ ಹಾಡು, ನೃತ್ಯಗಳಲ್ಲಿ ತಲ್ಲೀನರಾಗಿದ್ದರು. ಸ್ವಲ್ಪ ಹೊತ್ತಿನಲ್ಲಿ ಬಸ್ಸು ರಾಮನಗರದ ಹತ್ತಿರ ಬಂದಿತು. ಆಗ ಸಮಯ ಸರಿಸುಮಾರು ಸಂಜೆ ೮.೩೦. ಬಸ್ಸಿನಲ್ಲಿದ್ದ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಬಸ್ಸಿನಲ್ಲೇ ಕುಳಿತು ತಮ್ಮ ತಿಂಡಿಗಳನ್ನು ತಿನ್ನಲು ಶುರು ಮಾಡಿದರೇನೋ. ನಂತರದ ನಿಮಿಷಗಳಲ್ಲೇ ತಿನ್ನಲು ಬಳಸಿದ ಕಾಗದದ ಪ್ಲೇಟ್ಗಳನ್ನು ಒಬ್ಬೊಬ್ಬರೇ ಕಿಟಕಿಯಿಂದ ತೂರಲಾರಂಭಿಸಿದರು. ಬಸ್ಸು ಬೆಂಗಳೂರಿನ ಹತ್ತಿರ ಪ್ರವೇಶಿಸುವ ಹೊತ್ತಿಗೆ ತಮ್ಮ ಎಲ್ಲ ಕಸಗಳನ್ನೂ ದಾರಿ ಉದ್ದಕ್ಕೂ ರಸ್ತೆಯಲ್ಲಿ ವಿಸರ್ಜನೆ ಮಾಡಿ ಆಗಿತ್ತು. ಬಸ್ಸಿನ ಒಳಗೆ ಕುಳಿತಿದ್ದ ಒಬ್ಬ ವಿದ್ಯಾರ್ಥಿಗಾಗಲಿ ಅಥವಾ ಶಿಕ್ಷಕರಿಗಾಗಲಿ ತಾವು ಈ ರೀತಿ ಮಾಡಬಾರದು ಎಂದು ಯೋಚಿಸುವ ವಿವೇಚನೆ ಇಲ್ಲದಿತ್ತೋ ಏನೋ?

ಕಳೆದೆರಡು ವರ್ಷಗಳ ಹಿಂದೆ ಬೆಂಗಳೂರಿನ ಹತ್ತಿರವಿರುವ ಮುತ್ತತ್ತಿ ಎಂಬ ಪ್ರವಾಸಿ ತಾಣಕ್ಕೆ ಭೇಟಿ ನೀಡಿದ್ದೆ. ದಟ್ಟ ಕಾಡು, ಬೆಟ್ಟ, ಗುಡ್ಡ ಹಾಗೂ ಕಾವೇರಿ ನದಿ ತೀರದಲ್ಲಿರುವ ಒಂದು ಪ್ರವಾಸಿ ತಾಣವೇ ಮುತ್ತತ್ತಿ. ದಟ್ಟ ಕಾನನದ ನಡುವೆ ಹರಿಯುತ್ತಿರುವ ಕಾವೇರಿ ನದಿ ತಟದಲ್ಲಿ ಕುಳಿತು ಮನೋಲ್ಲಾಸ ಹೊಂದುವ ಇಚ್ಛೆ ಇದ್ದುದರಿಂದ ಡಾಂಬರು ಕಾಣದ, ಕಂದಕಗಳಿಂದಲೇ ತುಂಬಿದ ರಸ್ತೆಯಲ್ಲಿ ಪ್ರಯಾಣಿಸಿದ ಆಯಾಸವೇ ತಿಳಿಯಲಿಲ್ಲ. ಆದರೆ ಮುತ್ತತ್ತಿಯಲ್ಲಿ ಇಳಿದ ಮೇಲೆ ಕಂಡ ವಾತಾವರಣವೇ ಬೇರೆ. ಕಾವೇರಿ ನದಿ ಜುಳುಜುಳನೆ ಹರಿಯುತ್ತಿತ್ತು. ನದಿಯ ದಂಡೆಯ ಇಕ್ಕೆಲಗಳಲ್ಲಿ ನೂರಾರು ಜನ ಮಾಂಸಾಹಾರವನ್ನು ಬೇಯಿಸಿ ಅಲ್ಲಲ್ಲಿ ಕುಳಿತು ಊಟ ಮಾಡುತ್ತಿದ್ದರು. ಊಟ ಮಾಡಿ ಅಳಿದುಳಿದ ಪದಾರ್ಥಗಳನ್ನು ನದಿಯ ನೀರಿನಲ್ಲಿ ಅಥವಾ ದಂಡೆಯ ಮೇಲೆ ಸುರಿಯುತ್ತಿದ್ದರು. ತಾವು ತಿನ್ನಲು ಹಾಗೂ ಆಹಾರ ತಯಾರಿಸಲು ಬಳಸಿದ ಪಾತ್ರೆ ಪಗಡಗಳನ್ನು ನದಿಯಲ್ಲೇ ತೊಳೆಯುತ್ತಿದ್ದರು. ಹತ್ತಿರದಲ್ಲಿ ಕೆಲವು ಯುವಕರು ಮದ್ಯಸೇವನೆ ಮಾಡಿ ಮದ್ಯದ ಬಾಟಲಿಗಳನ್ನು ನೀರಿನಲ್ಲೇ ಬಿಸಾಡುತ್ತಿದ್ದರು. ನದಿಯ ಇಕ್ಕೆಲ ಪ್ಲಾಸ್ಟಿಕ್ ವಸ್ತುಗಳು, ಒಡೆದ ಬಾಟಲಿಗಳು, ಪ್ರವಾಸಿಗರು ಎಸೆದುಹೋದ ಕಸದಿಂದ ತುಂಬಿಹೋಗಿತ್ತು. ಈ ಉಸಿರುಗಟ್ಟಿಸುವ ವಾತಾವರಣವನ್ನು ನೋಡಿ ಬಂದ ದಾರಿಗೆ ಸುಂಕವಿಲ್ಲವೆಂದು ತಕ್ಷಣ ತಿರುಗಿ ಬಂದದ್ದಾಯಿತು.

ಕೆಲವು ವರ್ಷಗಳ ಹಿಂದೆ ಹೈದರಾಬಾದ್‌ನ ಪ್ರಖ್ಯಾತ 'ಗೋಲ್ಕಂಡ ಫೋರ್ಟ್'ಗೆ ಭೇಟಿ ನೀಡಿದ್ದೆ. ಭೇಟಿಗೆ ಮುಂಚೆ ಗೋಲ್ಕಂಡ ಫೋರ್ಟ್‌ನ ಇತಿಹಾಸವನ್ನು ಗೂಗಲ್‌ನಲ್ಲಿ ಓದಿ ಮನಸ್ಸಿನಲ್ಲಿ ಕೋಟೆಯ ಬಗ್ಗೆ ಏನೇನೊ ಕಲ್ಪನೆ ಕಟ್ಟಿ ಅಲ್ಲಿದ್ದ ಕಲ್ಲಿನ ಮೆಟ್ಟಿಲುಗಳನ್ನು ಹತ್ತಿ ಕೋಟೆಯ ತುತ್ತತುದಿ ಬಹಳ ಪ್ರಯಾಸದಿಂದ ತಲುಪಿದ್ದಾಯಿತು. ಹಿಂದೂ ಮುಸ್ಲಿಂ ಜನಾಂಗದ ಸಾಮರಸ್ಯ, ಇತಿಹಾಸದ ಪ್ರತೀಕವನ್ನು ಸಾರುವ ಕೋಟೆಯ ತುತ್ತತುದಿಯ ಭಾಗದಲ್ಲಿ ಕಂಡಿದ್ದು ಕೇವಲ ಕಸದ ರಾಶಿ, ಅಲ್ಲಲ್ಲಿ ತಿಂದು ಬಿಟ್ಟು ಒಗೆದಿದ್ದ ಆಹಾರ ಪದಾರ್ಥಗಳು, ಕೋಟೆಯ ಗೋಡೆಗಳ ಮೇಲೆ ಪ್ರವಾಸಿಗರು ಕೆತ್ತಿದ್ದ ಕೈಬರಹಗಳು, ತಮ್ಮ ನಾಮಾಂಕಿತಗಳು ಅಷ್ಟೇ.

ಇವು ಕೇವಲ ಉದಾಹರಣೆಗಳಷ್ಟೇ. ಭಾರತದ ಯಾವುದೇ ಪ್ರವಾಸಿತಾಣಗಳಿಗೆ ಹೋದರೆ ನಮ್ಮ ಸುತ್ತಮುತ್ತ ನಾವು ಕಾಣುವ ಪರಿಸ್ಥಿತಿ ಇದೊಂದೇ. ವಿಶ್ವದ ಯಾವುದೇ ದೇಶಗಳಿಗೆ ಹೋಲಿಸಿದರೆ ಅತ್ಯಂತ ವೈವಿದ್ಯತೆಯಿಂದ ಕೂಡಿದ, ನೈಸರ್ಗಿಕ ಹಾಗು ಸಾಂಸ್ಕೃತಿಕ ವೈವಿಧ್ಯತೆಗಳಿರುವ ಪ್ರವಾಸಿ ತಾಣಗಳನ್ನು ಹೊಂದಿದ ದೇಶ ನಮ್ಮ ಭಾರತ. ಆದರೆ ಸರಿಯಾದ ವಿಧಾನಗಳಲ್ಲಿ ಪರಿಸರದ ಶುಚಿತ್ವವನ್ನು ಕಾಪಾಡುವ ಯಾವುದೇ ಕ್ರಮಗಳನ್ನು ನಾವು ಕೈಗೊಂಡಂತಿಲ್ಲ. ಬೇರೆ ದೇಶಗಳ ಪ್ರವಾಸಿ ತಾಣಗಳಿಗೆ, ನಗರಗಳಿಗೆ ಭೇಟಿ ನೀಡಿ ಅವುಗಳನ್ನು ಹಾಡಿ ಹೊಗಳುವ ನಾವು, ನಮ್ಮದೇ ದೇಶದಲ್ಲಿರುವ ಪ್ರವಾಸಿ ತಾಣಗಳ ಅಥವಾ ನಮ್ಮ ಸುತ್ತ ಮುತ್ತಲ ಪರಿಸರದ ಸ್ವಚ್ಛತೆಗೆ ಯಾವುದೇ ಸರಿಯಾದ ಕ್ರಮಗಳನ್ನು ಕೈಗೊಂಡಿಲ್ಲ. ನಾವು ಸರಕಾರವನ್ನು ಈ ನ್ಯೂನತೆಗೆ ದೂಷಿಸುತ್ತೇವೆ, ಆದರೆ ಈ ಪರಿಸ್ಥಿತಿಗೆ ಕಾರಣ ನಾವೇ ಎಂಬುದನ್ನು ಮರೆತುಬಿಡುತ್ತೇವೆ.

ಸ್ವಚ್ಛತೆ ಎಂಬುದು ವಾಟ್ಸ್‌ಅಪ್ ಮೆಸೇಜ್ ಗಳಿಗೆ ಅಥವಾ ಗಾಂಧಿ ಜಯಂತಿ ದಿನ ಮಾಡುವ ಭಾಷಣಕ್ಕೆ ಸೀಮಿತವಾಗುತ್ತಿದೆ. ನಮ್ಮ ಪರಿಸರವನ್ನು ಹಾಗೂ ನಮ್ಮ ಪ್ರವಾಸಿತಾಣಗಳನ್ನು ಸಂರಕ್ಷಿಸಿಕೊಳ್ಳುವ ಹೊಣೆ ನಮ್ಮ ಮೇಲೆ ಇದೆ. ಇತರರಿಗೆ ನೀಡುವ ಉಪದೇಶಕ್ಕಿಂತ ನಾವೇ ಅದನ್ನು ಮೊದಲು ಪಾಲಿಸಿದರೆ ಸಾಕು. ನಮ್ಮ ಮಕ್ಕಳು ನಮ್ಮನ್ನು ನೋಡಿ ಕಲಿಯುತ್ತವೆ, ಉಪಾದ್ಯಾಯರನ್ನು ನೋಡಿ ವಿದ್ಯಾರ್ಥಿಗಳು ಕಲಿಯುತ್ತಾರೆ, ಒಬ್ಬ ಆದರ್ಶ ವಿದ್ಯಾರ್ಥಿಯನ್ನು ನೋಡಿ ಇತರ ವಿದ್ಯಾರ್ಥಿಗಳು ಕಲಿಯುತ್ತಾರೆ. ಈ ಸ್ವಚ್ಛತೆಯ ಪಾಲನೆ ನಮ್ಮಿಂದಲೇ ಶುರುವಾಗಬೇಕಿದೆ, ಏಕೆಂದರೆ ಇಂದಿನ ಮಕ್ಕಳೇ ನಾಳಿನ ಪ್ರಜೆಗಳು. “ಬೆಳೆಯುವ ಪೈರು ಮೊಳಕೆಯಲ್ಲಿ” ಎಂಬಂತೆ ನಮ್ಮ ಮಕ್ಕಳಿಗೆ ನಾವೇ ಸ್ವಚ್ಛತೆಯನ್ನು ಕಾಪಾಡಲು ಚಿಕ್ಕಂದಿನಿಂದಲೇ ಹೇಳಿಕೊಡಬೇಕು. ಇದರಿಂದ ಕಾಯಿಲೆಗಳ ಮಟ್ಟವೂ ಕಡಿಮೆಯಾಗುತ್ತದೆ. ಆದ್ದರಿಂದ ಹಿರಿಯರು ಹೇಳುವಂತೆ “ಮನೆ ಶುದ್ದವಿದ್ದರೆ ಮನಶುದ್ಧಿ”. ಹಾಗೆಯೇ, ಪರಿಸರ ಶುದ್ಧವಾಗಿದ್ದರೆ ನಾಡಿನ ಪ್ರಗತಿ.

ಜ್ಞಾನ

ಲೋಕ

# Yogi

- Arun Kamal

Featured as part of the World Yoga Day 2019 Celebrations

# Yogi

- Dr. Chandana Sri

Featured as part of the World Yoga Day 2019 Celebrations

# ಊರಿನಲ್ಲಿ ತೇರು

-"ಹಂಸಾನಂದಿ"

ನಾನು ಚಿಕ್ಕವನಾಗಿದ್ದಾಗಿಂದ ಪರೀಕ್ಷೆ ಮುಗಿದು ಬರುವ ಬೇಸಿಗೆ ರಜೆಗೆ ಕಾಯುತ್ತಿರುತ್ತಿದ್ದೆ. ಏಕೆಂದರೆ, ವರ್ಷದಲ್ಲಿ ಒಮ್ಮೆ ಮಾಡುತ್ತಿದ್ದ ರೈಲ್ವೆ ಪ್ರಯಾಣ ಆಗ ಬರುತ್ತಿತ್ತು. ಎಲ್ಲ ಮಕ್ಕಳಿಗೂ, ರೈಲು ಪ್ರಯಾಣ ಎಂದರೆ ಹೆಚ್ಚೇ ಆಸೆ ಎಂದು ನನ್ನೆಣಿಕೆ. ಆದರೆ, ನನ್ನ ಈ ರೈಲು ಪ್ರಯಾಣ ಮಾತ್ರ, ಬಹಳ ದೂರದ್ದಾಗಿರಲಿಲ್ಲ. ಆಗ ನಮ್ಮ ಊರಿಗೆ, (ಎಂದರೆ, ನನ್ನ ಪೂರ್ವಿಕರ ಊರಿಗೆ), ನನ್ನ ಊರಿಂದ (ಎಂದರೆ ಯಾವಾಗಲೂ ನನ್ನ ಊರು ಯಾವುದು ಎಂದು ನಾನೆಂದುಕೊಳ್ಳುತ್ತೇನೋ ಅದು) ಇದ್ದದ್ದು ಬರೀ ರೈಲು ಮಾತ್ರ. ಅರಸೀಕೆರೆಯಿಂದ ಮೈಸೂರಿಗೆ ಹೋಗುವ ದಾರಿಯಲ್ಲಿ ಐದು ಆರು ಮೈಲಿ ದಾಟಿ ಸಿಕ್ಕುತ್ತಿದ್ದಿದ್ದೇ ನಮ್ಮ ಹಳ್ಳಿ. ನಮ್ಮ ಅಜ್ಜ ಅಜ್ಜಿ ವಾಸ ಮಾಡುತ್ತಿದ್ದ ಮನೆ ಇದೆ ಅಲ್ಲಿ. ನನಗೆ ನೆನಪಿದ್ದಾಗಿನಿಂದ, ಅವರು ನಮ್ಮ ಮನೆಯಲ್ಲೇ ಇದ್ದುದ್ದರಿಂದ, ನನಗೆ ಅದು ಅಜ್ಜ-ಅಜ್ಜಿ ಮನೆ ಅನ್ನಿಸದೇ, ಒಂದು ರಜಾ ಕಾಲದ ಮನೆಯಾಗಿರುತ್ತಿತ್ತು.

ಈ ಹದಿನೈದು ನಿಮಿಷದ ರೈಲು ಪ್ರಯಾಣಕ್ಕೆ ಯಾಕಪ್ಪಾ ಅಷ್ಟು ಉತ್ಸಾಹ ಎಂದಿರಾ? ಇನ್ನೆಲ್ಲಿಗೆ ಹೋಗಬೇಕಾಗಿದ್ದರೂ ಬಸ್ಸನ್ನೇ ಹಿಡಿಯುತ್ತಿದ್ದ ನಾವು ಇಲ್ಲಿಗೆ ಮಾತ್ರ, ರೈಲು ಹಿಡಿಯುತ್ತಿದ್ದಿದ್ದು ಒಂದಾದರೆ, ಹಳ್ಳಿಯಲ್ಲಿ ಹೋಗಿ ಆರೆಂಟು ದಿನ ಇರುತ್ತೇವಲ್ಲ ಎನ್ನುವುದು ಇನ್ನೊಂದು ಕಾರಣ ಇರಬೇಕು. ಮತ್ತೆ ಅದಕ್ಕಿಂತ ಹೆಚ್ಚಿಗೆ, ಊರಿನಲ್ಲಿದ್ದ ನಮ್ಮ ಮನೆಯಲ್ಲಿ ವರ್ಷ ಪೂರ್ತಿ ಯಾರೂ ವಾಸ ಇರುತ್ತಿದ್ದಿಲ್ಲ. ಅದಕ್ಕೆ, ನಾವು ಎಂಟು ದಿನ ಒಂದು ಸಂಸಾರ ನಡೆಸಬೇಕಾದರೆ ಬೇಕಾಗುವಷ್ಟು ವಸ್ತುಗಳೆಲ್ಲ - ಅಂದರೆ ಪಾತ್ರೆ, ಪರಟಿ, ದವಸ ದಿನಸಿ, ಉಪ್ಪು ಮೆಣಸು ಪ್ರತಿಯೊಂದನ್ನೂ ಕಟ್ಟಿಕೊಂಡು ಹೊರಡುತ್ತಿದ್ದೆವು. ಅದರ ಸಂಭ್ರಮವೇ ಸಂಭ್ರಮ ನನಗೆ! ಮತ್ತೆ ಮಧ್ಯಾಹ್ನ ಹತ್ತಿರದಲ್ಲೇ ಇದ್ದ ರಂಗೋಲಿ ಗುಂಡಿಯಲ್ಲಿ ಮಜೀದ್ ಸಾಬರನ್ನೋ, ಅವರ ಅಣ್ಣನನ್ನೋ ಹೋಗಿ, ಮೂರುಗಂಟೆಗೆ ಕುದುರೆಗಾಡಿಯೊಂದಿಗೆ ಬರಬೇಕು ಅಂತ ಕರೆದುಬರುತ್ತಿದ್ದೆ. ಆಗಿನ್ನೂ ಆಟೋರಿಕ್ಷಾಗಳೂ ಬಹಳ ಹೆಚ್ಚಿರಲಿಲ್ಲ. ಇದ್ದರೂ, ನಮ್ಮ ಎಂಟು ದಿನದ ಸಂಸಾರಕ್ಕೆ ಬೇಕಾಗುವ ಸಾಮಾನೆಲ್ಲ ಎತ್ತಿಕೊಂಡು ಹೋಗಲು ನಾಲ್ಕಾದರೂ ಆಟೋರಿಕ್ಷಾಗಳು ಬೇಕಾಗಿರುತ್ತಿದ್ದವೇನೋ! ಹಾಗಾಗಿ, ಮಜೀದ್ ಸಾಹೇಬರ ಕುದುರೆ ಗಾಡಿಯೇ ನಮಗೆ ಕಟ್ಟಿಟ್ಟದ್ದಾಗಿತ್ತು. ನನ್ನ ಅಜ್ಜ ತಾವು ಸಾಕಿದ್ದ ಕೊನೆಯ ಕೆಲವು ಕುದುರೆಗಳನ್ನೂ ಮಜೀದ್ ಸಾಬರ ತಂದೆಗೋ ಅಣ್ಣನಿಗೂ ಮಾರಿದ್ದೂ ಈ ನಂಟಿಗೆ ಕಾರಣವಾಗಿತ್ತೋ, ನನಗೆ ನೆನಪಿಲ್ಲ.

ಈ ಪ್ರಯಾಣವನ್ನು ನಾನು ಅಷ್ಟು ಹೆಚ್ಚು ಕಾಯುತ್ತಿದ್ದಿದ್ದಕ್ಕೆ ಇನ್ನೊಂದು ಕಾರಣವಿತ್ತು. ಊರಿನ ಮನೆಯಲ್ಲೊಂದು ಉಯ್ಯಾಲೆ ಮಣೆ ಇತ್ತು. ಪಟ್ಟಣವಾಸದ ನಮ್ಮ ಮನೆಯಲ್ಲಿ ಉಯ್ಯಾಲೆ ಎಲ್ಲಿ ಬರಬೇಕು? ಹಳ್ಳಿಯ ಮನೆಯಾದರೆ ದೇಶೋವಿಶಾಲವಾಗಿತ್ತು. ಹೋದ ಕೂಡಲೆ ಉಯ್ಯಾಲೆ ಹಾಕುವಂತೆ ನನ್ನ ತಂದೆಗೆ ದುಂಬಾಲು ಬೀಳುತ್ತಿದ್ದೆ ನಾನು. ಅದರಲ್ಲೋ, ಒಟ್ಟಿಗೆ ಇಬ್ಬರೋ ಮೂವರೋ ಕೂರಬಹುದಿತ್ತಷ್ಟೆ. ಹಾಗಾಗಿ, ಬೇರೆಯವರ ಜೊತೆ ಸ್ವಲ್ಪ ಜಗಳವಾಡೇ ಅಲ್ಲಿ ಅಧಿಕಾರ ಸ್ಥಾಪಿಸಿಕೊಳ್ಳುತ್ತಿದ್ದೆ ನಾನು. ಎಲ್ಲರಿಗಿಂತ ಕಿರಿಯವನಾಗಿದ್ದರಿಂದ, ನನ್ನ ಆಟವೂ ನಡೆಯುತ್ತಿತ್ತು ಎನ್ನಿ.

ನಮ್ಮ ಹಳ್ಳಿಯಲ್ಲಿ ಒಂದು ಲಕ್ಷ್ಮೀಕೇಶವನ ಗುಡಿ ಇದೆ. ಗುಡಿ ಸಾಧಾರಣದ್ದೇ ಆಗಿದ್ದರೂ, ದೇವರ ಮೂರ್ತಿ ಮಾತ್ರ ಬಹಳ ಸುಂದರ. ಇವೆಲ್ಲ ಹೊಯ್ಸಳರ ಕಾಲದ್ದೇ ಮೂರ್ತಿಗಳು ಅಂತ ಎಲ್ಲರೂ ಹೇಳ್ತಾರೆ. ಪ್ರತೀ ವರ್ಷ ಚೈತ್ರದ ಹುಣ್ಣಿಮೆಯ ದಿನ ಅಲ್ಲಿ ತೇರು. ತೇರಿಗೆ ಮೂರು ದಿವಸ ಮೊದಲು ಶುರುವಾಗುವ ಉತ್ಸವಗಳು, ಆಮೇಲೆ ಮತ್ತೊಂದು ವಾರದ ವರೆಗೂ ಇರುತ್ತವೆ. ನಾವು ಅಲ್ಲಿಗೆ ಹೋಗುತ್ತಿದ್ದಿದ್ದೂ ಇದೇ ಸಮಯದಲ್ಲೇ. ಹಾಗೇ ಸುಮಾರು ಎಲ್ಲರ ಮನೆಯಲ್ಲೂ ಊರಿನಿಂದ ಬಂದ ನೆಂಟರು ಇಷ್ಟರು ಇರುತ್ತಿದ್ದರು. ಹೀಗೆ, ವರ್ಷಕ್ಕೊಮ್ಮೆ ಸಿಕ್ಕುವ ಕೆಲವು ಗೆಳೆಯರಿದ್ದರು ನನಗೆ ಅಲ್ಲಿ.

ರಥೋತ್ಸವದ ದಿನ ಊರಿನಲ್ಲಿ ಸಡಗರವೋ ಸಡಗರ. ಎಲ್ಲ ಹೆಂಗೆಳೆಯರೂ ಮನೆಯಮುಂದೆ ಗುಡಿಸಿ ಸಾರಿಸಿ ರಂಗೋಲಿ ಹಾಕಿರುತ್ತಿದ್ದರು. ಆಗಿನ ನನ್ನ ಚಿಕ್ಕ ಕಣ್ಣುಗಳಿಗೆ, ಅವು ದೊಡ್ಡದಾಗಿ ತೋರುತ್ತಿದ್ದವೋ, ಅಥವಾ ನಿಜಕ್ಕೂ ಬಹಳ ದೊಡ್ಡ ರಂಗೋಲಿ ಚಿತ್ತಾರಗಳನ್ನು ಬಿಡಿಸುತ್ತಿದ್ದರೋ? ಯಾಕೋ ಬಗೆಹರಿಯುತ್ತಿಲ್ಲ. ಬೆಳಗ್ಗೆಯೇ ಒಂದು ಸಲ ದೇವರ ದರ್ಶನಕ್ಕೆ ಹೋಗಿರುತ್ತಿದ್ದೆವು. ನಂತರ ಅಲ್ಲೇ ಛತ್ರದಲ್ಲಿ ತಿಂಡಿ ತಿಂದು ಮನೆಗೆ ಬರುವಷ್ಟರಲ್ಲಿ ಬೇರೆ ಊರಿಂದ ರಥೋತ್ಸವಕ್ಕೆ ಬರುವ ಭಕ್ತರು ಊರಿಗೆ ಕಾಲಿಡತೊಡಗುತ್ತಿದ್ದರು. ಬಂದವರಿಗೆ ಊರಲ್ಲಿ ಯಾರದಾದರೂ ಪರಿಚಯವಿದ್ದರೆ ಅವರ ಮನೆಗೆ ಹೋದಾರು. ಇಲ್ಲದಿದ್ದರೂ ಚಿಂತೆಯಿಲ್ಲ. ತೇರಿನ ದಿನ, ಎಲ್ಲರ ಮನೆ ಬಾಗಿಲೂ ತೆರೆದೇ ಇರುವುದು. ಎಲ್ಲಿ ಹೋಗಿ ಬೇಕಾದರೂ ತಂಗಬಹುದು. ಬಂದವರಿಗೆಲ್ಲ ಆಯಾ ಮನೆಯವರ ಶಕ್ತ್ಯಾನುಸಾರ ಕಾಫಿಯದ್ದೋ ಪಾನಕದ್ದೋ ಸರಬರಾಜು ಆಗುತ್ತಲೇ ಇರುತ್ತಿತ್ತು. ನಮ್ಮ ಮನೆಗೂ ಹೀಗೇ ಐವತ್ತೋ ಅರವತ್ತೋ ಜನ ಬಂದಿರುತ್ತಿದ್ದರು. ಬಂದವರು ತಮ್ಮ ಚೀಲವನ್ನು ಇಟ್ಟು ದೇವರ ದರುಶನ ಮಾಡಿಕೊಂಡು ನಂತರ ಅಲ್ಲೇ ಜಗಲಿಯಲ್ಲೋ ಹಜಾರದಲ್ಲೋ ಹರಟುತ್ತ ಕೂತಿರುತ್ತಿದ್ದರು.

ಮಧ್ಯಾಹ್ನದ ವೇಳೆಗೆ ರಥ. ಊರಿನ ನಾಲ್ಕೂ ಬೀದಿಗಳಲ್ಲಿ ಅದರ ಸಂಚಾರ. ಸಾವಿರಾರು ಜನ ಸೇರಿ ಆ ಅಲಂಕರಿಸಿದ ಮಹಾರಥವನ್ನು ಎಳೆಯುವುದೇ ಒಂದು ರೋಮಾಂಚಕಾರಿ ಅನುಭವ. ಚಿಕ್ಕ ಹಳ್ಳಿಯ ರಸ್ತೆಯಾದ್ದರಿಂದ ಅದಕ್ಕೆ ಅಡೆತಡೆಗಳೂ ಹಲವು. ಜೋರಾಗಿ ಎಳೆದರೆ, ಒಂದು ಮೂಲೆಯಲ್ಲಿ ರಥ ಸುಮಾರು ಒಬ್ಬರ ಮನೆಯ ಮುಂದಿನ ತನಕ ಬಂದು ಬಿಡುತ್ತಿತ್ತು. ಇಷ್ಟೆಲ್ಲದರ ನಡುವೆಯೂ ರಥ ಊರಿನಲ್ಲಿ ಹೋಗುವಾಗ,

“ಡೋಲಾಯಮಾನಂ ಗೋವಿಂದಂ ಮಂಚಸ್ಥಂ ಮಧುಸೂಧನಂ
ರಥಸ್ಥ ಕೇಶವಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ”

ಮಂಚದ ಮೇಲೋಲಾಡುತ್ತಿರುವಾ ಗೋವಿಂದನ ಮಧುವ ಮಡುಹಿದನ
ರಥದಲ್ಲಿರುವ ಕೇಶವನ ಕಂಡರೆ ಇರದೋ ಎಮಗೆ ಮರುಹುಟ್ಟು!

ಎಂದು ಹೇಳಿಕೊಳ್ಳುತ್ತಾ, ಹಿರಿಯರೆನ್ನದೆ ಕಿರಿಯರೆನ್ನದೆ ದೇವರಿಗೆ ಬಾಳೆ ಹಣ್ಣೆಸೆಯುವುದನ್ನು ನೋಡಿಯೇ ತೀರಬೇಕು.

ರಥೋತ್ಸವದ ಸಂಜೆಯ ಹೊತ್ತಿಗೆ ಬಂದವರೆಲ್ಲ ಹೊರಟಿರುತ್ತಿದ್ದರು. ನಂತರ ನನಗೆ ಉಳಿಯುತ್ತಿದ್ದುದು ದಿವಸಕ್ಕೆ ಮೂರು ಉತ್ಸವಗಳು, ಅವಕ್ಕೆ ಸಿಕ್ಕುತ್ತಿದ್ದ ಚರುಪು, ಮತ್ತೆ ಹಗಲೆಲ್ಲ ಉಯ್ಯಾಲೆ ಆಟ!



# ಕವನ: ಬಾ ನೀನೂ ನನ್ನೊಡನೆ

- ವೆಂಕಟೇಶಪ್ರಸನ್ನ

**ರಾಬರ್ಟ್ ಫ್ರಾಸ್ಟ್ ಅವರ "ದಿ ಪ್ಯಾಶ್ಚರ್" ಎಂಬ ಕವನದ ಕನ್ನಡ ಅನುವಾದ:**

**ಗೋಮಾಳ ಹಸನಾಗಿಸಲೆಂದು ಹೊರಟಿಹೆನು;**
**ಚೆಲ್ಲಿರುವ ತರಗುಗಳ ಗುಡಿಸೆತ್ತಿ ಮರಳುವೆನು**
**ತಿಳಿ ನೀರ ಚಿಲುಮೆ ಕಂಡರೆಕ್ಷಣವೆ ನಿಂತೇನು**
**ಹೊತ್ತು ಮಾಡದೆ ಬರುವೆ. - ಬಾ ನೀನೂ ನನ್ನೊಡನೆ.**

**ಪುಟ್ಟ ಕರುವನು ಮನೆಗೆ ಕರೆತರಲು ಹೊರಟಿಹೆನು;**
**ಹಸುಳೆಯದು, ತಾಯಿಗೊರಗಿಯೇ ನಿಂತಿಹುದು**
**ಮಮತೆ ವಾತ್ಸಲ್ಯದಿಂ ನೆಕ್ಕಲದು ನಲುಗುವುದು**
**ಹೊತ್ತು ಮಾಡದೆ ಬರುವೆ. - ಬಾ ನೀನೂ ನನ್ನೊಡನೆ.**

**Original poem by Robert Frost - "The Pasture":**

**I'm going out to clean the pasture spring;**
**I'll only stop to rake the leaves away**
**(And wait to watch the water clear, I may):**
**I shan't be gone long. -- You come too.**

**I'm going out to fetch the little calf**
**That's standing by the mother. It's so young,**
**It totters when she licks it with her tongue.**
**I shan't be gone long. -- You come too.**

# TechToon: “Garbage Collection” in Bengaluru?

- Venkateshprasanna

As the garbage management issues in the city of Bangalore deepened, the corporators of BBMP got together to discuss their latest foolproof solution to the problem...

Bangalore is full of Programmers, who, I have heard, know a bit about “garbage collection”. We’ll pass a resolution and pass on the problem to them.

meeting on...

BBMP

Yes, I have heard that they spring into action if you dangle some “pointers” at them. We just need to find out what that means...

# Jñana  Loka



**Jñana Loka Multi Language Monthly**
**June 2019**
**Published in e-Version only**

**Total Pages: 32 (including cover pages and contents)**

**Publishers**
**Venkateshprasanna H. M.**
( hmvpstart@gmail.com ) / ( Twitter: @hmvprasanna )
&
**Shivaprasad K.**
( ksp20001@gmail.com )